ಶ್ರೀ

ಓಂ ತತ್ಸತ್

# ಚಿನ್ಮೂರ್ತಿ

(ತ್ರಿಪದಿಗಳು)





[illegible]ಕರು ಹಾಗು ಪ್ರಕಾಶಕರು:
ಶ್ರೀ ನಿರುಪಾದಯ್ಯಸ್ವಾಮಿಗಳು
ಶ್ರೀ ಅಡವಿಸ್ವಾಮಿ ಮಠಾಧಿಪತಿಗಳು
ಮರೆಗುದ್ದಿ

ಇಸ್ವಿ ೧೯೭೬ ಕ್ರಯ [illegible]-೦೦

# [illegible]

( ತ್ರಿಪದಿಗಳು )



ಲೇಖಕರು :

ಶ್ರೀ ನಿರುಪಾದಯ್ಯಸ್ವಾಮಿ

[ ಹಿಂದಿರತ್ನ (ಸ್ವರ್ಣಪದಕ); ಸಾಹಿತ್ಯರತ್ನ; ವಿದ್ಯಾಲಂಕಾರ ]

ಪ್ರಕಾಶಕರು :

ಶ್ರೀ ನಿರುಪಾದಯ್ಯಸ್ವಾಮಿ ಗುರು ಗುರುಪಾದಯ್ಯಸ್ವಾಮಿ

ಶ್ರೀ ಅಡವಿಸ್ವಾಮಿ ಮಠಾಧಿಪತಿಗಳು

ತಾ. ಜಮಖಂಡಿ ]  ಮರೆಗುದ್ದಿ  [ ಜಿ. ವಿಜಾಪೂರ

ಇಸ್ವಿ ೧೯೭೬  ಕ್ರಯ ೫–೦೦

ಮಾರ್ಗಶೀರ್ಷ ಕೃಷ್ಣಪಕ್ಷ ದಶಮಿ ಶಕೆ ೧೮೯೪          ದಿ. ೧೬-೧೨-೧೯೭೩

ಪ್ರಥಮ ಮುದ್ರಣ *** ಪ್ರತಿಗಳು ೧೦೦೦





---

ಮತಿ ಕವಿಯ ಜೀವನದಿ ಸತತದಾಘಾತವಿರೆ ।
ಗತಿ ತನ್ನ ನಿಷ್ಠೆ ಬಿಡಲಾರನವನೆಷ್ಟು ।
ಗತಿ ಸ್ವತಂತ್ರಮತಿ ಅಡವೇಶ ॥

ವರ್ಣನಿರೆ ಬಹುಮಧುರ ಕರ್ಣಕಿರೆಯತ್ಯಂತ ।
ಖಿನ್ನಳಿಯುತ ಪರಮಾನಂದ ಪ್ರಾಪ್ತಿಯಿರೆ ।
ಮಾನ್ಯ ಮಹಾಕಾವ್ಯ ಅಡವೇಶ ॥

ನೆಲೆಯೊಂದು ವಿರಲು ಬಹುಸೆಲೆ ಪುಟಿಕೆ ರುಚಿ ಭಿನ್ನ .
ಕೆಲವಿಲ್ಲಿ ಗ್ರಹಣ ಲಕ್ಷಾರ್ಥ ಮಾತ್ರದಿಂ ।
ಶೀಲಗಾನಂದ ಅಡವೇಶ ॥

ಸಂಶಯದ ಜೀವಿಯಡಿ ಹಂಸನಾಗಿರ್ದರೂ ।
ಸಂಶಯಿತ ಸತ್ಯ ವಿಷಪಯವನಳಿದು ಜಲ ।
ದಂಶದೊಳು ಈಸೊ ಅಡವೇಶ ॥

---



ಮುದ್ರಕರು :
ಸುಕುಮಾರ ಮುದ್ರಣಾಲಯ
ಕೋ-ಆಪ್. ಹೌಸಿಂಗ್ ಸೊಸೈಟಿ, ಬಾಗಲಕೋಟ



ಶ್ರೀಮತ್ ೧೦೦೮ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು
ಜಂಗಮವಾಡಿ ಮಠ, ಬನಾರಸ (ಕಾಶಿ)

# ಕೃತಿಯರ್ಪಣಂ

ಶಾರ್ದೂಲವಿಕ್ರೀಡಿತ—

ಚಂದ್ರಾರ್ಧಚೂಡ ಮುಖಾಂಗ ಸಂಭವದ-ವಿಶ್ವಾರಾಧ್ಯಸಿಂಹಾಸನೇ ।
ಚಂದ್ರಾಂಗೊಪ್ಪು ವಿರಾಜಮಾನ ಪ್ರತಿಭಾ ಸನ್ಮಾನ್ಯ ಸುಜ್ಞಾನರಾ ।
ವೃಂದಕ್ಕೆಲ್ಲ ವಿಭೂತಿ ಶ್ರೀಕರವರಾ ವಿಶ್ವೇಶ್ವರಾಚಾರ್ಯರಾ ।
ನಂದ್ಪದ್ಮಾಂಗದಿಯರ್ಪಿತಂ ತ್ರಿಪದಿಸ್ವಾರಸ್ಯಾರ್ಥ ಚಿನ್ಮೂರ್ತಿಯಂ ।

—ಶ್ರೀ ನಿರುಪಾದಯ್ಯಾಸ್ವಾಮಿಗಳು

ಕಾಶಿಪೀಠಕೆ ಐತಿಹಾಸಿಕತೆ ಬಹಳುಂಟು ।
ದರ್ಶನೀಯುವದು ನೋಡುವಿಚ್ಛೆಯು ನರಗೆ ।
ಕಾಶಿದಳ ಪ್ರಾಪ್ತಿ ಅಡವೇಶ ॥



## ಶ್ರೀ ಗುರುಮೂರ್ತಿ



ಲಿಂ. ಬ್ರಹ್ಮಶ್ರೀ ಗುರುಪಾದಯ್ಯ ಸ್ವಾಮಿಗಳು
ಮರೆಗುದ್ದಿ

ಜನನ : ೨೧-೮-೧೯೧೩ ಲಿಂಗೈಕ್ಯ : ೩-೧-೧೯೭೪

## ಲೇಖಕರು



ಶ್ರೀ ನಿರುಪಾದಯ್ಯ ಸ್ವಾಮಿಗಳು

# ಮುನ್ನುಡಿ

ಮರೇಗುದ್ದಿಯ ಪೂಜ್ಯ ಬ್ರಹ್ಮಶ್ರೀ ನಿರುಪಾದಯ್ಯ ಸ್ವಾಮಿಗಳು 'ಚಿನ್ಮೂರ್ತಿ' ಎಂಬ ವಚನಸಂಕಲನವೊಂದನ್ನು ರಚಿಸಿದ್ದಾರೆ. ಹಿಂದೀರತ್ನ (ಸ್ವರ್ಣಪದಕ), ಸಾಹಿತ್ಯರತ್ನ, ವಿದ್ಯಾಲಂಕಾರ ಪದವಿಗಳಿಂದ ಭೂಷಿತ ರಾದ ಶ್ರೀಗಳವರು ತಮ್ಮ ಅನುಭಾವ ಸಂಪತ್ತಿನಿಂದ ಈ ಸಂಕಲನದಲ್ಲಿ ಸಾವಿರಕ್ಕೂ ಮೇಲ್ಪಟ್ಟ ವಚನಗಳನ್ನು ತ್ರಿಪದಿರೂಪದಲ್ಲಿ ರಚಿಸಿದ್ದಾರೆ. ಶ್ರೀಗಳವರ ಈ ಅಮೂಲ್ಯ 'ಚಿನ್ಮೂರ್ತಿ' ಗ್ರಂಥಕ್ಕೆ ಮುನ್ನುಡಿಯ ಕನ್ನಡಿಯೇಕೆ ?– ಅನ್ನಬಹುದು. ಆದರೆ ಶ್ರೀಗಳವರ ಆದೇಶದಂತೆ ಅನಿ ವಾರ್ಯವಾಗಿ ಈ ಮುನ್ನುಡಿಯನ್ನು ಬರೆಯಬೇಕಾಯಿತು.

ಬ್ರಹ್ಮಶ್ರೀ ನಿರುಪಾದಯ್ಯ ಸ್ವಾಮಿಗಳು 'ಅಡವೇಶ' ಎಂಬ ಅಂಕಿತ ವನ್ನಿಟ್ಟುಕೊಂಡು ತ್ರಿಪದಿರೂಪದಲ್ಲಿ ವಚನಗಳನ್ನು ಬರೆದಿದ್ದಾರೆ. ತ್ರಿಪದಿ ಅಚ್ಚಗನ್ನಡ ಛಂದೋರೂಪವಾಗಿದೆ. ತ್ರಿಪದಿ 'ಕನ್ನಡ ಛಂದೋಗಂಗೆಯ ಗಂಗೋತ್ರಿ'. ಅಂಶಗಣಾವಲಂಬಿಯಾದ ತ್ರಿಪದಿಯ ಮೂರು ಸಾಲುಗಳಲ್ಲಿ ಮೂರು ಲೋಕದ ಜನ ಮೆಚ್ಚುವ ಮಾತುಗಳನ್ನು ಅಡಕಗೊಳಿಸಬಹುದು. ಕಿರಿದಾದ ಕಟ್ಟಿನಲ್ಲಿ ಹಿರಿದಾದ ಅರ್ಥವನ್ನಿಟ್ಟು ಹೇಳುವದಕ್ಕೆ ತ್ರಿಪದಿರೂಪ ಬಹಳ ಅನುಕೂಲಕರವಾದ ಛಂದೋರೂಪ. ಕನ್ನಡ ಸಾಹಿತ್ಯದಲ್ಲಿ ತ್ರಿಪದಿ ಛಂದೋರೂಪಕ್ಕೆ ಹಿರಿಯ ಸ್ಥಾನ ಸಲ್ಲುವಂತೆ ಮಾಡಿದ ಶ್ರೇಯಸ್ಸು ಸರ್ವಜ್ಞ ಕವಿಗೆ ಸಲ್ಲುತ್ತದೆ. 'ತ್ರಿಪದಿ ಸಾಮ್ರಾಜ್ಯದ ಚಕ್ರವರ್ತಿ' ಸರ್ವಜ್ಞ ಕವಿ ಎಂದರೆ ತಪ್ಪಾಗಲಿಕ್ಕಿಲ್ಲ. ಜನತೆಯ ಕವಿಯಾದ ಸರ್ವಜ್ಞನು ಜನ ತೆಯ ಮಾತುಗಳಲ್ಲಿ ಅನೇಕ ವಿಷಯಗಳನ್ನು ಅವರಿಗೆ ಮನದಟ್ಟಾಗು ವಂತೆ ಬೋಧಿಸಿದನು. ಶ್ರೀಗಳವರು ಗ್ರಂಥದ ಆರಂಭದಲ್ಲಿ ಸರ್ವಜ್ಞ ಕವಿಯನ್ನು ಹೀಗೆ ಸ್ಮರಿಸಿದ್ದಾರೆ :

ಭಿಡೆಯಿಡದೆ ಸರ್ವಜ್ಞ ಬಿಡದೆ ಬರೆದಿಹನಂತು
ನುಡಿಸಿದ್ಧ ಸಾಕ್ಷಿ ಕವಿಯು ಸ್ವಾತಂತ್ರ್ಯಮತಿ
ನಾಡೊಡೆಯ ತಿಳಿಯೊ ಅಡವೇಶ.

ಸರ್ವಜ್ಞನ ವಚನಗಳಿಂದ ಪ್ರಭಾವಿತರಾದ ಬ್ರಹ್ಮಶ್ರೀ ನಿರುಪಾದಯ್ಯ ಸ್ವಾಮಿಗಳು ತ್ರಿಪದಿರೂಪವನ್ನೆ ಬಳಸಿಕೊಂಡು ಸಾವಿರಕ್ಕೂ ಮೇಲ್ಪಟ್ಟ ವಚನಗಳನ್ನು ಬರೆದಿದ್ದಾರೆ.

'ಚಿನ್ಮೂರ್ತಿ' ಇದೊಂದು ವಚನ ಸಂಕಲನ. ಇದರಲ್ಲಿ ಶ್ರೀಸ್ರಜ, ಶ್ರೀಕರ, ಶ್ರೀಸುಜ್ಞಾನಿ, ಸ್ವತ್ತುಸ್ವರ, ಸಮಯಸಂಕೇತ- ಎಂಬ ಐದು ಭಾಗಗಳಿವೆ. ಪ್ರತಿಯೊಂದು ಭಾಗದಲ್ಲಿ ನೂರಾರು ವಚನಗಳನ್ನು ರಚಿಸಲಾಗಿದೆ. ಆಧ್ಯಾತ್ಮ-ಲೌಕಿಕ, ಗುರು-ಶಿಷ್ಯ, ವಿಜ್ಞಾನಿ-ಸುಜ್ಞಾನಿ, ಧರ್ಮ-ಕರ್ಮ, ರೀತಿ-ನೀತಿ, ರಾಜಕಾರಣ-ಸಮಾಜವಾದ, ಹೀಗೆ ವಿವಿಧ ವಿಧದ ವಿಷಯಗಳನ್ನು ನಿರೂಪಿಸುವ ವಚನಗಳು ಇಲ್ಲಿವೆ. ವಿಷಯ ವೈವಿಧ್ಯಪೂರ್ಣವಾಗಿರುವಂತೆ ವಿಚಾರ ವೈಶಿಷ್ಟ್ಯಪೂರ್ಣವಾಗಿದೆ. ಇಲ್ಲಿ ಆಧ್ಯಾತ್ಮಿಕ-ಲೌಕಿಕ ವಿಚಾರಗಳ ಸಂಗಮವಿದೆ. ಆಧ್ಯಾತ್ಮಿಕ ವಿಷಯಗಳ ಜೊತೆಗೆ ಸಮಕಾಲೀನ ಸ್ಥಿತಿ-ಗತಿಗಳ ವಿಚಾರಗಳನ್ನು ಇಲ್ಲಿ ನಿರೂಪಿಸಲಾಗಿದೆ. ಲೌಕಿಕದಲ್ಲಿ ತೀರ ಆಧುನಿಕ ಪ್ರಚಲಿತ ವಿಷಯಗಳು ಸಮಾವೇಶಗೊಂಡಿವೆ. ಧರ್ಮ-ವಿಜ್ಞಾನ, ರೀತಿ-ನೀತಿ, ಶೀಲ, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಈ ಮುಂತಾದ ವಿಷಯಗಳನ್ನು ಕುರಿತು ಶ್ರೀಗಳವರು ತಮ್ಮ ಅಭಿಪ್ರಾಯಗಳನ್ನು ಖಂಡಿತವಾಗಿ ಮಂಡಿಸಿದ್ದಾರೆ. ಒಳ್ಳೆಯ ವಿಚಾರಗಳನ್ನು ಬೋಧಿಸಿರುವಂತೆ ಕೆಟ್ಟ ಆಚಾರ-ವಿಚಾರಗಳನ್ನು ಕಟುವಾಗಿ ಖಂಡಿಸಿದ್ದಾರೆ. ಶ್ರೀಗಳವರು ಡಾಂಭಿಕತೆಯನ್ನು ಟೀಕಿಸುತ್ತ

ಕಾವಿ ಧರಿಸಿದರೆ ಮಾನ್ಯ ದೇವನಾಗುವನೆನಲು
ಶೀವಿ ಮಹಿಷಂಗೆ ತೊಡಿಸಲ್ಕೆ ನಂದಿಯ
ಭಾವ ಗುಣವುಂಟೆ ಅಡವೇಶ.

ಎಂದು ಹೇಳಿದ್ದಾರೆ. ಆಧ್ಯಾತ್ಮಿಕ ವಿಚಾರಗಳನ್ನೊಳಗೊಂಡಿರುವ ವಚನಗಳು ಸರಳವಾಗಿ ಬಂದಿದ್ದರೂ ಕೆಲವೆಡೆ ಅರ್ಥ ಕ್ಲಿಷ್ಟವಾಗಿ ಬಂದಿವೆ. ಒಂದೊಂದು ಸಲ ಶಬ್ದಾಡಂಬರದಲ್ಲಿ ಅರ್ಥ ಅಸ್ಫುಟವಾಗುತ್ತದೆ. ಆದರೂ ಬಳಕೆ ಮಾತಿನಲ್ಲಿ ಅವರು ಬರೆದ ಕೆಲವು ವಚನಗಳು ಶ್ರೀ ಸಾಮಾನ್ಯನಿಗೂ ಅರ್ಥವಾಗಬಲ್ಲವು.

ಆಧುನಿಕ ಜೀವನದ ರೀತಿ-ನೀತಿಗಳನ್ನು ನಿರೂಪಿಸುವ ವಚನಗಳಲ್ಲಿ ಶ್ರೀಗಳವರ ವಿಚಾರ ಪ್ರಖರತೆಯನ್ನು ಕಾಣಬಹುದು. ರಾಷ್ಟ್ರದ ರಾಜಕೀಯ ಜೀವನ, ತುರ್ತ ಪರಿಸ್ಥಿತಿಯ ಮಹತ್ವವನ್ನು ತಿಳಿಸುವ ವಚನಗಳೂ ಇಲ್ಲಿವೆ. ಜನತೆಯಲ್ಲಿ ಕಂಡುಬರುವ ಅವಿಚಾರ-ಅನಾಚಾರಗಳನು ನೇರವಾಗಿ ಖಂಡಿಸಿದ್ದಾರೆ.

ಸತ್ತವನ ಹುಗಿಯಲ್ಕೆ ಹತ್ತು ಸುರೆ ಶಿಶೆ ಬೇಕು
ಕತ್ತೆಯಿಂ ಕೀಳು ಜಂಗುಳಿಯ ಚಲ್ಲಾಟ
ನಿತ್ಯ ನಡೆದಿಹುದು ಅಡವೇಶ

ಸಮಾಜದ ಅನಾರೋಗ್ಯದ ಕುರುಹಾದ ಕುಡುಕತನವನ್ನು ಇಲ್ಲಿ ಚೆನ್ನಾಗಿ ಬಿಂಬಿಸಿದ್ದಾರೆ.

ಹುಲ್ಲಿನೊಳು ಕಿಚ್ಚಿಟ್ಟು ಬೆಲ್ಲದಾ ನುಡಿಯೇಕೆ
ಬಲ್ಲದರೆ ನಿಮಗೆ ಸಲ್ಲಲಿತ ನಿರ್ಮಲದ
ಸಲ್ಲು ನುಡಿ ಬರದೆ ಅಡವೇಶ

ಒಳಗೊಂದು ಹೊರಗೊಂದು ಭಾವವನ್ನಿಟ್ಟುಕೊಂಡು ನುಡಿವ ಡಾಂಭಿಕರನ್ನು ಟೀಕಿಸಿದ್ದಾರೆ. ಮಠ–ಮಠಾಧಿಕಾರವನ್ನು ಕುರಿತು ಶ್ರೀಗಳು ವ್ಯಕ್ತಪಡಿಸಿದ ಅಭಿಪ್ರಾಯ ಮಹತ್ವಪೂರ್ಣವಾಗಿದೆ.

ಮಠದಿಂದ ಮಠವಲ್ಲ ಮಠಾಧಿಪತಿಯಿಂದದು
ಮಠವೆನಿಸಿಕೊಳು ಸಮಾಜಸುಧಾರಣೆಗೆ
ಮೇಟಿಯಾಗಿಹನು ಅಡವೇಶ

ಎಂಬಲ್ಲಿ ಮಠಾಧಿಕಾರಿಗಳಿಗೆ ಕಿವಿಮಾತು ಹೇಳಿದಂತಾಗಿದೆ. ತುರ್ತುಪರಿಸ್ಥಿತಿಯನ್ನು ಕುರಿತು ಹೇಳುತ್ತ 'ಪರಿಸ್ಥಿತಿಯ ನೆವದೊಳಗೆ ದುರಿತಕೃತಿ ಸಲ್ಲದದು' ಎಂದು ಎಚ್ಚರಿಸಿದ್ದಾರೆ. ಸಮಕಾಲೀನ ಸಮಸ್ಯೆಗಳ ಮೇಲೂ ಅವರು ತಮ್ಮ ವಿಚಾರಗಳನ್ನು ಸ್ಪಷ್ಟಪಡಿಸಿದ್ದಾರೆ:

ವತನ ಸಂಸ್ಥಾನಗಳು ಪತನವಾದವು ನೋಡ
ಜೊತೆಗೆ ಪ್ರತಿಬಂಧ ಧನ ಚಿನ್ನ ಭೂಮನೆಗೆ
ಮಿತಿಯ ಸಂತಾನ ಅಡವೇಶ

ಸಮಾಜವಾದದ ಮೂಲಕ ದುರ್ಬಲ ಸಮಾಜದ ಉದ್ಧಾರವಾಗಬೇಕು:

ಬಡವರ ಗುಡಿಸಲವ ಕೆಡೆದು ನುಡಿಯಲು ಬೇಡ
ನುಡಿದು ನಡೆದಿರುವ ಮಹಪುರುಷ–ಮಹಾಕಾವ್ಯ
ಪಿಡಿದ ಸ್ಥಾನವಿದು ಅಡವೇಶ

ಎಂದು ಸಾರಿದ್ದಾರೆ.

ಇಲ್ಲಿಯ ವಚನಗಳು ಸರಳವಾಗಿ ನಿರೂಪಣೆಗೊಂಡಿವೆ. ಆಡು ಮಾತಿನ ಸೊಗಸನ್ನು ಇಲ್ಲಿ ಕಾಣಬಹುದು:

'ಕೊಸರಿ ಕೇಸರಿಯಾಗು ಮುಸುರಿ ಪ್ರಿಯನಾಗದಿರು'
'ಕಾದಿಯೊಳು ಕಲೆಯುಂಟು, ಹಾದಿಯೊಳು ಗತಿಯುಂಟು'
'ಕತ್ತೆಮರಿ ಸುಂದರಿಗೆ ಮುದ್ದು ಕೊಡುವದುಂಟೆ'
'ತಲೆಯಿಲ್ಲದವಳಿಂಗೆ ಮಾಲೆಯೆಲ್ಲಿರಿಸುವೆಯೊ'– ಈ ಮುಂತಾದ ಮಾತುಗಳಲ್ಲಿ ಆ ಸೊಗಸು ವ್ಯಕ್ತಗೊಂಡಿದೆ.

ಯುವಜನಾಂಗದಲ್ಲಿ ಕಂಡು ಬರುವ ಹಿಪ್ಪಿ ಪ್ರವೃತ್ತಿಯನ್ನು 'ಇವನೋರ್ವ ನವಧೂತ' ಎಂದು ಹಾಸ್ಯದ ಸವಿರಿನಲ್ಲಿ ಮೂದಲಿಸಿದ್ದಾರೆ. ಇಲ್ಲಿ ಬರುವ ವಿಷಯ ವಿಚಾರಗಳು ಸ್ವಾರಸ್ಯಪೂರ್ಣವಾಗಿವೆ.

ಈ ಸಂಕಲನದಲ್ಲಿ ಎಷ್ಟೋ ವಚನಗಳಲ್ಲಿ ವಿಷಯ ವಿಚಾರಗಳ ಪುನರುಕ್ತಿ. ಕಂಡು ಬರುತ್ತದೆ. ಕೆಲವೊಂದು ವಚನಗಳು ಅಸ್ಪಷ್ಟವಾಗುತ್ತವೆ. ಪ್ರಾಸದ ಮೋಹದಲ್ಲಿ ಶಬ್ದ ಜಾಲದಲ್ಲಿ ಅರ್ಥ ಕುಸಿದು ಹೋಗುತ್ತದೆ.

ಒಟ್ಟಿನಲ್ಲಿ ಶ್ರೀಗಳವರ ಸಹಜಸ್ಫೂರ್ತ ಭಾವದಿಂದ ಮೂಡಿಬಂದ ಈ ವಚನಗಳು ಓದುಗನ ಮನಸೆಳೆಯ ಬಲ್ಲವು; ಉತ್ತಮ ಸಂಸ್ಕಾರ ನೀಡಬಲ್ಲವುಗಳಾಗಿವೆ.

ಶ್ರೀಗಳವರೇ ತಮ್ಮ ಕೃತಿಯಲ್ಲಿ 'ಎಡೆ ನೋಡಿಯುಣ್ಣುವವ.... ಹರಳು ಬಂದಿರಲದನು ಕಡೆಗಿಡುತ ಕುಡಿಯೊ' ಎಂದು ಹೇಳಿರುವಂತೆ ಈ ವಚನಸಂಕಲನದಲ್ಲಿ ಎಡೆಮಾಯ್ದು ಬಂದ ತಪ್ಪುಗಳಿದ್ದರೂ ಕಡೆತನಕ ಬಂದ ಲೇಸಿಂಗೆ ತಲೆದೂಗಬೇಕಾಗುತ್ತದೆ. ಶ್ರೀಗಳವರ ಅವಿರತ ಪರಿಶ್ರಮದಿಂದ ಹೊಮ್ಮಿ ಬಂದಿರುವ ಈ ಕೃತಿಪುಷ್ಪವು ತನ್ನ ಕಂಪನ್ನು ಎಲ್ಲೆಡೆಗೂ ಸೂಸುವಂತಾಗಲಿ ಸಹೃದಯ ವಾಚಕನ ಮನೆ–ಮನಗಳನ್ನು ಬೆಳಗಲಿ ಎಂದು ಹಾರೈಸುತ್ತೇನೆ.

ತಮ್ಮ ಕೃತಿಯನ್ನು ಕುರಿತು ನಾಲ್ಕು ಮಾತುಗಳನ್ನು ಬರೆಯಲು ಅವಕಾಶಮಾಡಿಕೊಟ್ಟ ಶ್ರೀಗಳವರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಬಸವೇಶ್ವರ ಆರ್ಟ್ಸ ಕಾಲೇಜ
ಬಾಗಲಕೋಟ
೧೨–೧೨–೧೯೭೬

ಪ್ರೊ. ಎಸ್. ಜಿ. ಹುಬ್ಬಳ್ಳಿ

# ಸಮುಚಿತೋಕ್ತಿ

ರಸ ಏವ ಪರಂ ಬ್ರಹ್ಮ ರಸ ಏವ ಪರಾ ಗತಿಃ ।
ರಸೋ ಹಿ ಕಾಂತಿದಃ ಪುಂಸಾಂ........ಇತಿ ಸ್ಮೃತಃ ॥

ಸಾಹಿತ್ಯ ರೂಪುಗೊಳ್ಳುತ್ತಿರುವಾಗ ತನ್ನ ಜೊತೆ ಏನನ್ನಾದರೂ ಜೊತೆಗೂಡಿಸಿಕೊಳ್ಳುತ್ತದೆ. ಕೇವಲ ತಂತಿಯಿದ್ದರೆ ಸಾಲದು, ಅದನ್ನು ಕ್ರಮ ಕಲಾಬದ್ಧವಾಗಿ ನುಡಿಸುವ ಜಾಣ ಜೊತೆಗೂಡಬೇಕು. ಆಗ ಅದರ ಸ್ವರ ರಂಗ ತರಂಗ ಪವನ ಪ್ರವಾಹವಲ್ಲಿ ಬೆರೆತು ನಾದಮಯರನ್ನು ಆಲ್ಹಾದಗೊಳಿಸುತ್ತದೆ. ಕೇವಲ ಬತ್ತಿ ಬೆಳಗಲಾರದು; ಜೊತೆಗೆ ತೈಲ ಹಾಗು ಪಾವಕದ ಸಂಸ್ಕಾರ ಅದಕ್ಕೆ ಬೇಕು. ಆ ಜ್ಯೋತಿ ಸಂದಿ ಸಂದಿಯಲ್ಲಿ ಹೊಕ್ಕು ಅಲ್ಲಿದ್ದ ಸರ್ವ ವಸ್ತುಗಳನ್ನು ಬೆಳಗಿಸುವಂತೆ ಎದುರಿಗಿದ್ದ ಪರಿಮಿತಿಯ ವಸ್ತುವಿನೊಳಗೆ ಹೊಕ್ಕು ಸಂಶೋಧನೆ ಮಾಡುವದೇ ಅದನ್ನು ಪ್ರಕಾಶಕ್ಕೆ ತರುವದೇ ಸಾಹಿತ್ಯ ಕೃತಿ–ಕವಿಯಮತಿ. ರೂಪುಗೊಂಡು ಬಂದಿರುವ ಕವಿತೆ ಇಲ್ಲವೆ ಆಯಾ ಕೃತಿಗಳು ಯಾವದೇ ಬಣ್ಣ ತೊಟ್ಟು ಬಂದಿದ್ದರೂ ಪಟುತರವಾದದ್ದನ್ನು ಎತ್ತಿಹಿಡಿದು ಹೊರಟರೆ ಅದಕ್ಕೆ ಸಾಹಿತ್ಯವೆನಬೇಕು. ಹೃದಯ–ಮೆದುಳಿನ ವಿಚಾರಾನುಭೂತಿಯ ವಿವಿಧ–ದಳದ ಶಬ್ದ ಕಲಾಬದ್ಧ ಸಿದ್ಧಕಲೆಯೇ ಸಾಹಿತ್ಯ.

ಇದು ದೃಶ್ಯ–ಭಾವಾನುರೂಪ ಹೊಂದಿರುತ್ತದೆ. ದೃಶ್ಯ ವಸ್ತುಗಳ ಕಂಡು ಮಿಂಚಿನಂತೆ ಪುಟಿದೇಳಬಹುದು. ಹೊರಟಿರುವ ವಿಚಾರತರಂಗವೇ ಚಿರಾಯುಮಾನ, ರಸಾನುಭೂತಿಯಲ್ಲಿ ಬೆಳಗಬಹುದು. ಪಾಠಕರ ಹೃದಯ ವೇಗ ಮೆದುಳಿನ ಝುರಿಯನ್ನು ಭರತಿಯನ್ನಾಗಿ ಮಾಡಬಹುದು. ಮಾನವ ಜೀವಿಜುವಿರದ ಅರಣ್ಯದಲ್ಲಿ ಪ್ರಕೃತಿ ಸಿದ್ಧ ಶಬ್ದ ಚಿತ್ರ ವಿವಿಧರೂಪದಲ್ಲಿ ಕೇಳಬರುತ್ತದೆ. ಕೇಳಿದ್ದನ್ನು ನಾದಮಯನನ್ನಾಗಿ ರೂಪುಗೊಳಿಸುತ್ತಾನೆ. ನದಿಯ ನಾದ ಪಶು, ಪಕ್ಷಿ, ಕ್ರಿಮಿಕೀಟ, ವೃಕ್ಷಗಳ ಘರ್ಷಣಾ ನಾದಗಳ ಜೊತೆ ಸಂಕಲಿಸಿ ಕೇಳಿ ಬರುತ್ತಿರುವ ಆನಂದಗಳೆಲ್ಲ ರೇಖಾಬದ್ಧ ಸಾಹಿತ್ಯದಲ್ಲಿ

ಮೂರ್ತಗೊಂಡವು. ಇಂಥಹ ವಿವಿಧ ವಿಷಯಗಳ ಮಾಲೆಗೇ ಬುಧರು ಸಾಹಿತ್ಯವೆಂದು ಕರೆದರು. ಸಾಹಿತಿಯು ಆಯಾ ವಸ್ತುಗಳ ಜೊತೆಗೆ ಹೊಂದಿಕೊಂಡು ತನಗಾದ ಸ್ವಾನುಭೂತಿಯನ್ನು ಪ್ರಚುರಗೊಳಿಸುತ್ತಾನೆ. ಇವನು ದುಃಖಿಯ ಜೊತೆ ದುಃಖಿಯಾಗಿಯೂ, ಸುಖಿಯ ಜೊತೆ ಸುಖಿಯಾಗಿಯೂ ಸಾಗಬಲ್ಲ. ಅದು ಸುಮ್ಮನಿರಗೊಡದೆ ಹೃದಯಭಾವದಂತೆ ಹೊರಸೂಸುತ್ತದೆ. ಅವೆಲ್ಲ ಭಾವಗಳೇ ಶಿಲಾಲೇಖವಾಗಿಯೋ ಪತ್ರಪ್ರತಿಯಾಗಿಯೋ ಮೂಡಿನಿಂತವು. ಹಲವಾರು ರಂಗದ ಪಡಿಯಚ್ಚಿನ ಪಟಪಸ್ತ್ರದಂತೆ ಮನೋಹರವಾಗಿ ತೋರುವದು ಕಂಡವಗೆ ಮಾತ್ರ; ಭಾವ ಕುರುಡನಿಗೆಂತು ?

ಮನ ಬುದ್ಧಿಯ ಮೇಲೆ ಪರಿಣಾಮ ಬೀರುವಂತಿರುವ ಧರ್ಮ ಸಾಹಿತ್ಯಕ್ಕೆ ಹಲವಾರು ಸಮಸ್ಯೆಗಳನ್ನು ಎದುರಿಸುವಂಥ; ಎದುರಿಸಿ ಯಶಸ್ವಿಯಾಗುವಂತ ಸ್ಥಿತಿ ಶಕ್ತಿಯಿದಕ್ಕೆ ಇರುತ್ತದೆ. ಇರದಿರೆ ಇದಕ್ಕೆ ಸಾಹಿತ್ಯವೆಂದು ಎಂತು ಕರೆಯಬೇಕು ? ಕೇವಲ ಜಾತಿ ತತ್ವಾಧಾರದ ಮೇಲಿಂದ ಧರ್ಮವೆಂದು ಗ್ರಹಿಸಿಕೊಳ್ಳುವವನು ಮೂರ್ಖನೆಂದೇ ಹೇಳಿಕೊಳ್ಳಬೇಕು. ತತ್ವ ಸಾಹಿತ್ಯದ ಮೇಲೆ ಬೆಳಗಿದ ಭೂಮಿಯಲ್ಲಿ ಇಂದು ಒಂದೊಂದು ರೀತಿಯಲ್ಲಿ ಕಾರಿಕೊಳ್ಳುತ್ತಲಿದೆ. ಸತ್ಯಾರ್ಥಕ್ಕೆ ವಿರೋಧ ಬಂದಾಗ ಶ್ರೀ ಬಸವ ತನ್ನ ಮಂತ್ರಿಪದವನ್ನೇ ತ್ಯಾಗ ಮಾಡಿ ಕಪ್ಪಡಿ ಸಂಗಮನೆಡೆ ಅಂದು ನಡೆದರೆ, ಈಗಾವ ಸ್ಥಿತಿ? ಕಾಣುತಿರೆ ಕನ್ನಡಿಯೇಕೆ? ಕಂಡದ್ದನ್ನು ನುಡಿದು ನುಡಿಸುವ ಪುಟಗಳು ಬೇಕು. ಕಂಡದ್ದನ್ನು ನುಡಿಯಬೇಕೆಂಬ ಮಾತು ಬಂದಾಗ ಸರ್ವಜ್ಞನ ನೆನಪು ಬರುತ್ತದೆ. ಇದರಂತೆ ಹಿಂದಿ ಭಾಷೆಯಲ್ಲಿ ಕಬೀರನ ದೋಹೆಗಳಲ್ಲಿ ಕೆಲವಾಂಶ ಕಾಣಬಹುದು. ಉಲ್ಲೇಖಿಸಿದಂಥ ಭಾವವನ್ನು ತಿಳಿದುಕೊಳ್ಳಬೇಕಾದರೆ ಪಾಠಕನು ಸ್ವಯಂ ಕವಿಭಾವಿಯಾಗಿ ಸಾಗಬೇಕಾಗುತ್ತದೆ. ಉದಾ:– ಭಕ್ತಿಯಾಧ್ಯಾತ್ಮ ಕೃತಿಗಳಲ್ಲಿ ಆ ಸ್ವರೂಪನಾಗಿಯೇ ಸಾಗಿದಾಗ ಅದರ ರುಚಿಯು ಅನುಭವಕ್ಕೆ ಬಂದೇ ಬರುತ್ತದೆ. ಬರಿ ಹಣ್ಣನ್ನು ನೋಡಿದರೆ ಸ್ವಾದಾನುಭವವೆಂತು? ರುಚಿಸಬೇಕೆಂಬ ಭಾವಿಗೆ ಮಾತ್ರವಲ್ಲವೆ! ಅದರಂತೆ ಭಕ್ತಿಯಾಧ್ಯಾತ್ಮದೆಡೆ ಹೊರಳಿದರೆ ಅದೆಷ್ಟು ಸಂತೋಷವೆಂಬುದು ಗುಣಿಸಬಲ್ಲವರಾರು ?

ಗದ್ಯ-ಪದ್ಯಾತ್ಮಕರಂಗದಲ್ಲಿ ಕಲಾಸೃಷ್ಟಿ ಮತ್ತು ಕಾಲಗತಿಯಂತೆ ಸೃಷ್ಟಿ ಕಂಡುಬರುವ ವಸ್ತುಗಳು. ಕಾಲ ಸೃಷ್ಟಿಯಂತೂ ದಿನ ದಿನಕ್ಕೆ ಬದಲಾವಣೆ ಇದ್ದೇ ಇದೆ. ಒಮ್ಮೆ ಬರೆದ ಕಲಾಕೃತಿಯು ಬದಲಾಗುವದಿಲ್ಲ. ಕೃತಿಗಳು ಸಾಹಿತ್ಯದ ವಿಕಾಸವನ್ನು ಸೂಚಿಸುತ್ತವೆ. ಫಲಗಳಿಂದ ತೃಪ್ತಿಯಾಗುತ್ತದೆ ಕಾರಣವೇ ಅವುಗಳನ್ನು ಕಂಡು ಸಂತೋಷವಾಗುತ್ತದೆ. ಅದರಂತೆ ಪ್ರೀಯಪ್ರೀಯ ಸಾಹಿತ್ಯ ಕೃತಿಗಳನ್ನು ಕಂಡು ಅವರವರ ರುಚಿಯಂತೆ ಸುಖವೆನಿಸುತ್ತದೆ.

ಕರವಿಟ್ಟ ವಸ್ತುಗಳು ಕಲೆಯೆನ್ನಬಹುದೆ? ಜಗದುದಯಾದಿಯಿಂದ ಜೀವಿಗಳ ಹೃದಯ ವಿಕಾಸವಾದಾಗ ಸಂಭವಿಸಿದ ಕಲೆ ಒಂದಿಲ್ಲೊಂದು ರೀತಿಯಿಂದ ವಿಕಾಸವಾಗುತ್ತ ಬಂದಿದೆ. ಬಾಹ್ಯಸೌಂದರ್ಯ ಸಹಕಾರಿಯಾದರೂ ಭಾವಸೌಂದರ್ಯವಿರದಿದ್ದರೆ ಅದಕ್ಕೆ ಬೆಲೆಯೆಂತು ಬಂದೀತು! ಭಾವ ಸೌಂದರ್ಯ ಉಳ್ಳವನ ಭಾವೋಕ್ತಿ ಸವಿಯುಕ್ತಿಗಳಾಗಿ ಪರಿಣಮಿಸುತ್ತವೆ. ಇವನಿಗೆ ಬಿಡೆಯಾವುದಿಲ್ಲ. ಹಣದ ಆಸೆಯ ಮೇಲೆ ಯಾರನ್ನಾದರೂ ಸ್ತುತಿಸುವದು ಅವನ ಧರ್ಮವಲ್ಲ.

ಬರಿಯ ಕಲೆಗೆ ಕಲೆಯನ್ನುವರಾರು? ಅದು ಅನುಪಮವಾಗಿ ರೂಪುಗೊಳ್ಳಲು ಶಿರ ಹೃದಯ ಕರಗಳು ಅನುಪಮವಾಗಿರಲು ಸಾಕು. ಪ್ರಕೃತಿ ಕಲಾ ಸೌಂದರ್ಯ ಎಷ್ಟಿದ್ದರೇನು! ಪುರುಷನೊಳು ಮೂಡದೇ ಹೋದರೆ ಪ್ರಕೃತಿ ಕಲೆಯ ಬೆಲೆಯೇನು? ಕಲೆಯನ್ನು ಕಂಡು ಕಲೆಯ ಉದಯವಿದು ಸಿದ್ಧ; ಅದುವೆ ನಿಜದ ಕಲೆಯಾಗಿ ಚಿರಾಯುಮಾನವಾಗಬಹುದಲ್ಲವೆ! ಬರುತಿರುವ ತೆರೆಗಳಲ್ಲಿ ಸ್ವರರಂಗ ಕಾಣುವದು ತನ್ನ ಸ್ವಾನಂದವೆನಬಹುದಲ್ಲವೆ?

ಸಮಾಜಕ್ಕೂ ಕಾವ್ಯಕಲೆಗೂ ಸಂಬಂಧವಿದೆ. ಇದುವೆ ಕಾವ್ಯಾದಿಗಳಿಗೆ ಉಪಕರಣವಾಗಿರಲೂ ಬಹುದು. ಮತಿ ಭಾವಯುಕ್ತ ಶಬ್ದ ಕಲಾಬದ್ಧ ರಚನೆ ಕವಿತೆ ತಿಳಿ. ಕೆಲ ನವೀನ ಪದ್ಯಗಳು ಛಂದಸ್ಸಿನ ಸರಪಳಿಯನ್ನು ಹರಿದು ಹೊರಟಿವೆ. ಮಾತ್ರಾಗಣದಿಂದ ಕೂಡಿದ ಪದ್ಯಗಳು ಸ್ವರಯುಕ್ತವಾಗಿ ನುಡಿಯಲು ಸಾಧಿಸಿದಂತೆ, ಇನ್ನುಳಿದವು ಅಷ್ಟು ಸಾಧಿಸಲಿಕ್ಕಿಲ್ಲ.

ಬಹು ವಿಷಯುವನ್ನು ಸ್ವಲ್ಪೇ ಶಬ್ದಗಳಲ್ಲಿ ಹೇಳುವ ಶಕ್ತಿ ಇದಕ್ಕೆ ಇದೆ. ಆದ್ದರಿಂದ ಕಾವ್ಯದ ಸ್ಥಾನವು ಸಾಹಿತ್ಯದಲ್ಲಿ ಉಚ್ಚ ಸ್ಥಾನವನ್ನು ಹೊಂದಿದೆ.

ಭಾವಕ್ಕೂ ಅದರ ವೇಗಕ್ಕೂ ಇಷ್ಟೇ ಇದೆ ಎಂದು ನಿಯಮವಿಲ್ಲ. ಅದು ಯಾರ ಆಧೀನವೂ ಅಲ್ಲ ಕಂಡ ವಸ್ತುವನ್ನು ಕಂಡಂತೆ ಕಾಣದೆ ಪ್ರತಿ ಭಾವ ಚಿತ್ರದಲ್ಲೂ ಕಾಣಬಹುದು. ಹಿಂದೀ ಭಾಷಾ ನವೀನ ಕವಿ ಶ್ರೀ ಪಂತಜೀಯುವರ ಕವಿತೆಗಳಲ್ಲಿ ಕಾಣಬಹುದು. ಅಂತಹ ಪದ್ಯಗಳು ನಮ್ಮ ರಕ್ತದ ಮೆದುಳಿನಲ್ಲಿ ಹೊಸಗಾಳಿಯನ್ನೇ ಬೀಸುತ್ತವೆ. ಸಮುದ್ರದಲ್ಲಿಯ ತೆರೆಗಳಂತೆ, ಗಗನದಲ್ಲಿಯ ಮಿಂಚಿನಂತೆ, ಗುಡಿಗಿನಂತೆ ಪುಟಿದೆಬ್ಬಿಸುತ್ತವೆ. ಇದರಲ್ಲಿಯ ಮತ್ತೋರ್ವ ಭಾವಿಕನು ವಿಲಕ್ಷಣ ರೀತಿಯ ರಸವನ್ನೇ ಸಹಜ ವಾಗಿ ಕಾಣುತ್ತಾನೆ.

ರಸವೆಲ್ಲೆಡೆ ಇದ್ದರೂ ಆ ರಸಾನುಭೂತಿ ಎಲ್ಲರಿಗೂ ಇಲ್ಲ ರಸವಿದ್ದಲ್ಲಿ ಚೇತನತೆಯುಂಟು. ಒಣದೆಲೆಯಲ್ಲಿ ಯಾವ ಮಿಂಚನ್ನು ಕಾಣುತ್ತೇವೆ! ಬರೀ ಶಬ್ದದಲ್ಲಿ ರಸವಿಲ್ಲ ಭಾವ ಸಂಯೋಜಿತ ಶಬ್ದಗಳ ಹೃದಯದಲ್ಲಿ ರಸವಿದೆ. ಒಂದೊಂದು ಪ್ರಸಂಗವಿಡಿದು ಆಯಾ ರಸಗಳು ಅನುಭೂತಿಗೆ ಬರುತ್ತವೆ. ಆಯಾ ಶತಮಾನಗಳಲ್ಲಿ ನಡೆದ ಘಟನೆಯಂತೆ ಆಯಾ ರಸಗಳ ರಚನೆ ರಚಿತವಾಗುತ್ತವೆ. ಉದಾ:- ಮುಸಲ್ಮಾನರ ಆಕ್ರಮಣದಲ್ಲಿ ರಜ ಪೂತ, ಕನ್ನಡಿಗರ ಶೌರ್ಯ ವರ್ಣನೆ ಆಯಾ ಗ್ರಂಥಗಳಲ್ಲಿ ಕಾಣಬಹುದು. ಅನುಭವ ಮಂಟಪದ ಚೇತನದ ನಾನಾ ದೆಸೆಗಳಲ್ಲಿ ಭಕ್ತಿರಸದ ಕೃತಿಗಳು ಉದಯವಾದವು. ತತ್ಸಮಯದ ಪ್ರಭಾವದಲ್ಲಿ, ಶಿವ ಭಾವ ಸುಖ ಸಾಮ್ರಾ ಜ್ಯದಲ್ಲಿ ಭಕ್ತಿ ಸಮೂಹವು ಬೆಳಗಲಿಕ್ಕೆ ಹತ್ತಿತು. ಅಂತೂ ಕಾಲಗತಿ·ಸ್ಥಿತಿ ಯಂತೆ ಸಾಹಿತ್ಯ ಸೃಷ್ಟಿಯಾಗುತ್ತದೆಂಬುದು ನಿಶ್ಚಯುವು. ಇದರಿಂದ ಮುಂಬರುವ ಸಮಾಜಕ್ಕೆ ಆಯಾ ಸಮಯುದ ಸ್ಥಿತಿಗತಿಗಳನ್ನು ಕಂಡು ಕೊಳ್ಳಲು ಸಹಾಯಕವಾಗುತ್ತವೆ.

ಯಥಾರ್ಥವಾದ ಸಾಹಿತ್ಯ ಚಿರಂಜೀವಿಯಾಗಬಲ್ಲದು. ಶಬ್ದ ಮಾಧು ರ್ಯದ ಜೊತೆಗೆ ಭಾವದಾಹ್ವಾನ ಆದರ್ಶತೆ ಪ್ರದೀಪದ ಕಿರಣದಂತೆ, ವ್ಯಾಪ

ಕತೆಯಲ್ಲಿ ಒಯ್ದು ಮುಟ್ಟಿಸುವಂತೆ, ಆಯಾ ರಚನೆಗಳಲ್ಲಿ ಕಂಡುಬರುತ್ತವೆ. ವ್ಯರ್ಥ ವಿಷಯ ಸಾಗರದಷ್ಟಿದ್ದರೂ ಅರ್ಥ ಉಳ್ಳದ್ದು ಮಿತಿಯೊಳಿದ್ದರೂ ಸಾಕು. ಕ್ರಿಯಾತ್ಮಕ ಗ್ರಂಥಗಳಿಂದ ವೃತ್ತಿ ಅಂತರ್ಮುಖವಾದರೆ ಇನ್ನುಳಿದ ಗ್ರಂಥಗಳು ಬಹಿರ್ಮುಖವೆನಿಸಬಹುದು. ಶ್ರೇಯದಲ್ಲಿ ವಿಶ್ರಾಂತಿ; ಪ್ರಶಾಂತಿ ಇನ್ನುಳಿದವುಗಳಲ್ಲಿ ಭ್ರಾಂತಿ, ಕ್ರಾಂತಿ. ಜಲವಿರುವ ಪಾತ್ರೆಯಲ್ಲಿ ಸೂರ್ಯನ ಕಿರಣ ಬಿದ್ದು ಪ್ರತಿಬಿಂಬ ಗೋಡೆಯ ಮೇಲೆ ಬೀಳುವಂತೆ ಓದುವವನ ಸೂಕ್ಷ್ಮ ದೃಷ್ಟಿ ಕಾವ್ಯರೂಪ ನಿರ್ಮಲ ಜಲದಲ್ಲಿ ಬಿದ್ದಾಗ ಹೊಸದೊಂದು ಕಿರಣ ಜ್ವಾಲಾಮುಖಿಯಂತೆ ಹೊರಬಿದ್ದರೂ ಕೆಲವೊಂದು ಭಾವಪೂರ್ಣ ಪ್ರಕಟ; ಕೆಲವೊಂದು ಅಪ್ರಕಟವಾಗಬಹುದು.

ಇಂಥ ಮಹಾನ್ ಕೃತಿಗಳನ್ನು ಮಹಾನ್ ಸಾಹಿತಿಗಳು ಸಾಹಿತ್ಯಲೋಕಕ್ಕೆ ಅರ್ಪಿಸಿದ್ದಾರೆ, ಅರ್ಪಿಸುತ್ತಲೂ ಇದ್ದಾರೆ. ಈ ದೆಸೆಯಲ್ಲಿ ಹಿಂದಿನ ಕವಿಗಳನ್ನು ಸ್ಮರಿಸುತ್ತ ಶ್ರೀಗುರುಗಳು ನಿಯಮಿಸಿದ ಮಠಾಧಿಪತ್ಯ–ದಾಸೋಹಾದಿ ಕಾಯಕದಲ್ಲಿ, ಹಳ್ಳಿಗಳ ಸಂಚಾರದಲ್ಲಿ ಈ ನಾಲ್ಕನೆಯ ಕೃತಿ 'ಚಿನ್ಮೂರ್ತಿ' ಸಿದ್ಧವಾಗಿ ವಾಚಕರ ಮುಂದೆ ಇಡಲಾಗಿದೆ. ಪ್ರೇಮಪೂರ್ವಕವಾಗಿ ಸ್ವೀಕರಿಸಿದಲ್ಲಿ ನನ್ನ ಕೃತಿಯು ಸಾರ್ಥಕತೆಯಾಯಿತೆಂದು ಭಾವಿಸುತ್ತೇನೆ.

ಶ್ರೀ ಮಡಿವಾಳೇಶ್ವರ ಚರಿತೆ (ಭಾಮಿನಿ ಷಟ್ಪದಿ) ಮುಕ್ತಾಯಗತಿಯಲ್ಲಿ ಇದ್ದಾಗ ಪ್ರಾರಂಭವಾದ ಈ ಕೃತಿಯು ಮುಕ್ತಾಯ ಸ್ಥಿತಿಗೆ ಬಂದಿರುವಾಗ ಶ್ರೀಗುರುಗಳ ದ್ವಿತೀಯ ಪುಣ್ಯಾರಾಧನೆಯ (೧೬-೧-೧೯೭೭)ಪ್ರಸಂಗದಲ್ಲಿ ಮುದ್ರಣದ ಬಗ್ಗೆ ತಿಳಿಸಿದಾಗ ಮರೆಗುದ್ದಿ, ಕೊಣ್ಣೂರ, ಬುದ್ನಿ(ಪಿ.ಎಂ) ಜಾನಮಟ್ಟಿ, ಮೆಳ್ಳಿಗೇರಿ, ಸಿದ್ದಾಪೂರ, ಹುಲ್ಯಾಳ, ಹುನ್ನೂರ, ಕಾಖಂಡಕಿ, ಮದರಖಂಡಿ, ನಾವಲಗಿ, ಬೆಳಗಲಿ, ಹಿಡಕಲ್ (ತಾ. ರಾಯಭಾಗ), ಯಲ್ಲಟ್ಟಿ, ವಜ್ರಮಟ್ಟಿ, ಸಿದ್ದಾಪೂರ, ಕುಳ್ಳೊಳ್ಳಿ, ಆಲಗುಂಡಿ (ಬಿ.ಕೆ.), ಮಂಟೂರ, ಸೊನ್ನ, ರಬಕವಿ (ತಾ. ಬೀಳಗಿ) ಹಾಗು ಇನ್ನುಳಿದ ಗ್ರಾಮಗಳ ಶಿಷ್ಯ–ಸದ್ಭಕ್ತರು ಒಪ್ಪಿ ಮುದ್ರಣ ಮಾಡಿಸಿಕೊಟ್ಟದ್ದಕ್ಕಾಗಿ ಅವರೆಲ್ಲರಿಗೆ ಶ್ರೀ ಅಡವಿಸಿದ್ಧೇಶ್ವರನು ಆಯುರಾರೋಗ್ಯ ಐಶ್ವರ್ಯವನ್ನು ದಯಪಾಲಿಸಲಿ.

ಈ ಚಿನ್ಮೂರ್ತಿ ಕೃತಿಯನ್ನು ಲಿಂ. ಬ್ರಹ್ಮಶ್ರೀ ಗುರುಪಾದಯ್ಯ ಮಹಾಸ್ವಾಮಿಗಳವರ ತೃತೀಯ ಪುಣ್ಯಾರಾಧನೆಯ ಶುಭ ದಿನದಂದು (ತಾ ೩೦-೧೨-೭೬)ಬಿಡುಗಡೆ ಮಾಡುವ, ಈ ಕೃತಿಯ ಉಳಿದುಳಿದ ಲೋಪ ದೋಷಗಳನ್ನು ಸರಿಪಡಿಸಿ ಮುನ್ನುಡಿ ಬರೆದು ಕೊಟ್ಟ, ಬಾಗಲಕೋಟೆಯ ಬಸವೇಶ್ವರ ಕಲಾ ಮಹಾವಿದ್ಯಾಲಯದ ಕನ್ನಡ ವಿಭಾಗದ ಹಿರಿಯ ಪ್ರಾಧ್ಯಾಪಕರಾದ ಶ್ರೀ ಎಸ್. ಜಿ. ಹುಬ್ಬಳ್ಳಿ ಹಾಗು ಈ ಕೃತಿಯನ್ನು ಸಕಾಲಕ್ಕೆ ಅಂದವಾಗಿ ಮುದ್ರಿಸಿ ಕೊಟ್ಟ ಬಾಗಲಕೋಟೆಯ ಸುಕುಮಾರ ಮುದ್ರಣಾಲಯದ ಒಡೆಯರಾದ ಶ್ರೀ ಜಿ. ಎಂ. ಉಮಾಪತಿ ಶಾಸ್ತ್ರಿಗ ವರಿಗೂ ನಮ್ಮ ಹಾರ್ದಿಕ ಕೃತಜ್ಞತೆಗಳು.

ಬೆಲ್ಲದಡಿ ಬರಿ ಸೊಣವು ಸಲ್ಲು ಭಾವಿಗಳೆತ್ತೊ ?
ಶೀಲಾತ್ಮ ಸೆಲೆಯ ತಿಳಿಯದಿಹ ಕವಿವರ್ಯ ।
ಕಲ್ಲಾಗಿ ಸಾಗೊ ಅಡವೇಶ ॥

ಲೇಖಕರು
ನಿರುಪಾದಯ್ಯಸ್ವಾಮಿ ಗುರು ಗುರುಪಾದಯ್ಯಸ್ವಾಮಿ
ಅಡವಿಸ್ವಾಮಿ ಮಠ, ಮರೆಗುದ್ದಿ
ತಾ. ೬-೧೨-೧೯೭೬

# ಪರಿವಿಡಿ

(ಅಂಕಿಗಳು ಪುಟಗಳು)

# ಶುದ್ಧಿ ಪತ್ರಿಕೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧ | ೧೦ | ನಮಿಸುತಾಲ | ನಮಿಸುತಾಂ |
| ೨ | ೨೨ | ಭಿಡೆ | ಬಿಡೆ |
| ೪ | ೬ | ಪರತೃಷ್ತಿ | ಪರತೃಪ್ತಿ |
| ೫ | ೨ | ಭಕ್ಷಕ | ಭಷಕ |
| ೬ | ೧೧ | ಮದಯ | ದುದಯ |
| ೮ | ೧೯ | ಪರಮಾತ್ಮಾ | ಪರಮಾತ್ಮ |
| ೮ | ೨೧ | ತರಂಗೆ | ತುಂಗೆ |
| ೧೧ | ೧ | ವರಿ | ವರ |
| ೧೯ | ೬ | ಶಕ್ತಿಯೊಳು | ಶಕ್ತಿಯುಳು |
| ೧೯ | ೧೫ | ಬಿರ | ಚಿರ |
| ೨೦ | ೧೪ | ಕರವೆ | ಕರೆವೆ |
| ೨೨ | ೫ | ನಿನಾರಿಗಿರುವಿ | ನೀನಾರಿಗಿರುವಿ |
| ೩೩ | ೧೦ | ನೀ | ನಿ |
| ೩೭ | ೧೩ | ಮಾರುವೆಂತು | ಮಾಡರುವೆಂತು |
| ೩೮ | ೫ | ತಿಡೆದು | ತಡೆದು |
| ೩೮ | ೧೯ | ಹೇಳಿದಂತೆ | ಹೇಳಿದಳಂತೆ |
| ೪೨ | ೨೪ | ಕುಲಕಿಲರ | ಕುಲಕೀಳ |
| ೪೩ | ೧ | ರೋನದ | ರೋದನದ |
| ೪೭ | ೨೦ | ವಿದುರು | ವಿದುರ |
| ೪೯ | ೧೩ | ವನ್ಯೆ | ವನ್ಯ |
| ೫೧ | ೬ | ಮೂಡುತಿರೆ | ಮಾಡುತಿರೆ |
| ೫೩ | ೧೧ | ಮನೆಗಳ್ಳು, | ಮನೆಗಳ್ಳ |
| ೫೭ | ೨೦ | ಕರೆಯೊಲೆ | ಕರೆಯೋಲೆ |

| ಪುಟ | ಸಾಲ | ತಪ್ಪು | ಒಪ್ಪು |
|---|---|---|---|
| ೬೧ | ೪ | ಕಜ್ಟೆ | ಕಟ್ಟೆ |
| ೬೫ | ೧೦ | ಹೊರಲಕ್ಕೆ | ಹೊರಲಿಕ್ಕೆ |
| ೬೭ | ೫ | ಷ್ಮ್ರಾ | ಕ್ಷ್ಮ ್ರ |
| ೭೦ | ೨ | ನಿಗಮಾಂಗ ಮಾಂಗ | ನಿಗಮಾಗಮಾಂಗ |
| ೭೦ | ೯ | ಸೂನ್ನ ಗಹನಾರ್ಥಿ | ಸೂನ್ಯ–ಗಹನಾರ್ಥ |
| ೭೩ | ೫ | ವಾಯ | ದಾಯ |
| ೭೩ | ೫ | ಪುರದಾಂಗಗಳಲ್ಲ | ಪುರದಾಂಗಳಲ್ಲ |
| ೭೩ | ೭ | ಸಾಂಪ್ರಾ | ಸಾಂಪ್ರ |
| ೭೪ | ೧೮ | ಕಂಡು | ಕಂಡ |
| ೭೮ | ೧೯ | ದಾಹವಿಂ | ದಾಹದಿಂ |
| ೮೧ | ೧೧ | ರಚಿ | ರುಚಿ |
| ೮೪ | ೧೧ | ನಿಧಿಯು | ನಿಧಿಯು ಭೂ |
| ೮೪ | ೧೩ | ಅಣ | ಗುಣ |
| ೮೫ | ೧೩ | ಚೊಕ್ಕೆ | ಚೊಕ್ಕ |
| ೮೬ | ೧೧ | ಹುಚ್ಚು | ಹಚ್ಚು |
| ೮೬ | ೧೬ | ರಿರೆ | ಳಿರೆ |
| ೮೭ | ೯ | ಶ್ರೀಯ ಗರ್ಭ | ಶ್ರೀಯನಿಜಗರ್ಭ |
| ೯೦ | ೧ | ಒಡವಿ | ಒದವಿ |
| ೯೪ | ೧೮ | ವನಿಂಗೆ | ವವನಿಂಗೆ |
| ೯೮ | ೮ | ಗುಣಗುಣಕೆ | ಗುಣಗುಣತೆ |
| ೧೦೨ | ೫ | ನಿಜದರ್ಥೆ | ನಿಜದರ್ಥ |
| ೧೦೨ | ೧೭ | ಕಾಲ | ಕಾಮ್ |
| ೧೧೬ | ೨೨ | ವತಿ | ಮತಿ |
| ೧೨೨ | ೨೩ | ಕೊಳ್ಬಬುದು | ಕೊಳ್ಬಹುದು |
| ೧೨೪ | ೧ | ಪುನಸಿಂಗೆ | ಮನಸಿಂಗೆ |
| ೧೨೪ | ೪ | ಸವ | ಸಹ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೨೪ | ೧೪ | ಬಿದಲು | ಬಿಡಲು |
| ೧೨೮ | ೨೦ | ಶಿವ | ಶವ |
| ೧೨೯ | ೫ | ವೆಂತು | ವಂತು |
| ೧೩೨ | ೨ | ಫಲವೆದುವೆ | ಫಲವದುವೆ |
| ೧೪೨ | ೮ | ಮುಂಡೆ ನಷ್ಟ | ಮುಂಡೆ ಕಷ್ಟ |
| ೧೪೨ | ೧೭ | ಗೊಳಿ | ಗೂಳಿ |
| ೧೪೫ | ೨೪ | ಕೃತಿಕೃತ್ಯ | ಕೃತಕೃತ್ಯ |
| ೧೪೭ | ೨೦ | ವೆನಿಲ್ಲ | ವೇಸಿಲ್ಲ |
| ೧೪೮ | ೨ | ಕೊಡು | ಕೊಡ |
| ೧೫೨ | ೩ | ಪವರ | ಸದರ |
| ೧೫೨ | ೧೬ | ಕಟ್ಟ | ಕಟ್ಟೆ |
| ೧೫೨ | ೨೨ | ಶಿಯೋಗ | ಶಿವಯೋಗ |

## ಮುನ್ನುಡಿ

| | | | |
|---|---|---|---|
| i | ೨೩ | ಭಿಡೆ | ಬಿಡೆ |
| iii | ೧೩ | ಕೊಳು | ಕೊಳ್ಳು |

## ಸಮುಚಿತೋಕ್ತಿ

| | | | |
|---|---|---|---|
| vi | ೧ | ಮುರ್ತ | ಮೂರ್ತ |
| x | ೧೧ | ತಳಿಯದಿಹ | ತಿಳಿಯದಿಹ |

ಓಂ ತತ್ಸತ್

# ಚಿನ್ಮೂರ್ತಿ



## (೧)

## ಶ್ರೀ ಸ್ರಜ

ನಮನ

ಶ್ರೀ ಮದ್ರುಚಿರ ಮಹಿಮ ಕಾಮಹರಸಾಮರಸ ।
ಹೇಮಗಿರಿ ಮಾನ್ಯ ಸಮತೆಗುರು ಶರಣಂಗೆ ।
ಸುಮನದಿಂ ನಮನ ಆಡವೇಶ ॥೧॥

ವಿವಿಧಗುಣಿ ನಿಧಿಕೋಶ ಕವಿಹೃದಯನಮನಗಣ
ದೇವ ಗುಹಾಗ್ರಜನ ನಮಿಸುತಾಲ ತ್ರಿಪದಿ ಮಣಿ ।
ಕವನ ಚಿನ್ಮೂರ್ತಿ ಆಡವೇಶ ॥೨॥

ಸನ್ಮಾನ್ಯ ಪಂಚಾರ್ಯ ಸನ್ಮತಿವಿಲಕ್ಷಣತೆ ।
ಮನ್ನ ಶಿವಕವಿಯ ಗುರು-ವಿರತ-ಯತಿಗಳಿಗೆ ।
ಮಣಿದು ದಿನ ಕೃತ್ಯ ಆಡವೇಶ ॥೩॥

ಕ್ರೂರನೃಪನರರಿಂದ ಬರುವ ಭಯಕಂಜದಯೆ ।
ವಿರುತ ಮುದ್ರಿಸಿದ ಕವಿಕುಲವ ನಿತ್ಯದಲಿ ।
ಸ್ಮರಿಸಿ ಸಾಗುವೆನು ಅಡವೇಶ ||೪||

ಕಷ್ಟಗಳು ಬರಲೆನಿತು ನಿಷ್ಠೆ ನಿಶ್ಚಿತಗೊಳಿಸು ।
ಭ್ರಷ್ಟರಿಂ ತಡೆಯು ಬರಲು ದಾಟುವ ಶಕ್ತಿ ।
ಶ್ರೇಷ್ಠ ಗುಣ ನೀಡು ಅಡವೇಶ ||೫||

ಸತ್ಯವೆನ್ನುವ ಕೆಲವರು ಮಿಥ್ಯವೆನ್ನುವ ಕೆಲವರು ।
ನಿತ್ಯ ನಾನಾರ್ಥವಿರಲೆನ್ನ ನಮನ ಸಾ ।
ಕ್ಷಿತ್ವವಿಹುದದಕೆ ಅಡವೇಶ ||೬||

ರಸದೃಷ್ಟಿ ರತಿಚಿತ್ರ ರಸಪ್ರಿಯರು ಕಂಡು ರಸ ।
ದುಸಿರು ಹಾಕುವರು ಕುಸುರೆನ್ನ ಮತಿದೃಷ್ಟಿ ।
ತುಸುಶಬ್ದ ಸೃಷ್ಟಿ ಅಡವೇಶ ||೭||

ಸರ್ವಜ್ಞ

ಮುಚ್ಚಿ ಬರೆಯದ ಪುರುಷ ಮೆಚ್ಚಿಹಾಡದ ಪುರುಷ ।
ದಚ್ಚಮತಿ ಪುರುಷ ನಿರ್ಭೀತ ತತ್ವಾಂಶ ।
ದೆಚ್ಚರದ ಪುರುಷ ಅಡವೇಶ ||೮||

ಹೊಗಳು ಭಟ್ಟನು ಅಲ್ಲ ನಗಧರನ ಭಿಡೆಯಿಲ್ಲ ।
ಅಗಳುದಾಸೆಯಲಿ ಲಗಳೆತ್ತು ನರನಲ್ಲ ।
ತ್ಯಾಗಿ ಕವಿಯೋಗಿ ಅಡವೇಶ ||೯||

ಭಿಡೆಯಿಡದೆ ಸರ್ವಜ್ಞ ಬಿಡದೆ ಬರೆದಿಹನಂತು ।
ನುಡಿಸಿದ್ಧ ಸಾಕ್ಷಿಕವಿಯು ಸ್ವಾತಂತ್ರ್ಯಮತಿ ।
ನಾಡೊಡೆಯ ತಿಳಿಯೊ ಅಡವೇಶ ||೧೦||

ಸರ್ವಜ್ಞ ಪದರಾಶಿ ಸರ್ವೆಡೆಗೆ ಮತಿತೃಪ್ತಿ ।
ಯೋರ್ವನೀ ಮುಕುರ ತಿಳಿಸುವದೆ ಮುಖದೋಷ ।
ಗರ್ವಿ ಸಂಗಮಕೆ ಅಡವೇಶ ||೧೧||

ಸರ್ವಾಂಗ ಶರವಚನ ಗುರಿಯಿಡಲಸಾಧ್ಯನಗೆ ।
ವಿರಲುಪಾಧಿಗಳು ಹರಿದೊಗೆದು ಬರೆಯಲಾಂ ।
ಗುರುವಾಜ್ಞೆ ದೂರ ಅಡವೇಶ ॥೧೨॥

## ವರ್ಣನೆ

ಸ್ಥೂಲಸೂಕ್ಷ್ಮತೆ ಗಂಧ ಕಲೆಯು ವರ್ಣನೆ ಭಿನ್ನ ।
ಸ್ಥೂಲಕ್ಕೆ ಕೊನೆಯು ದಪರವಿುತ ಸೂಕ್ಷ್ಮಕ್ಕೆ ।
ಕಲೆಯಪಾರ ಜಲ ಅಡವೇಶ ॥೧೩॥

ಸ್ಥೂಲ ವರ್ಣಿಸಲಹುದು ಸಲುಗೆ ಸಲಹೆಗಳಿದಕೆ ।
ಕಲೆ ಸೂಕ್ಷ್ಮ ಕಠಿಣ ಸೂಕ್ಷ್ಮಾನುಭವಿಸಲಹೆ ।
ಕಲಿಸಬಹುದಿದನು ಅಡವೇಶ ॥೧೪॥

ಭಾವಾಕ್ಷ ಕವಿಗುಂಟು ದೇವಂಗೆ ದಿವ್ಯಾಕ್ಷ ।
ನವ್ಯ ರಕ್ತಕ್ಕೆ ಕಾಮಾಕ್ಷ ಬಹುಕಾರ್ಯ ।
ದವಧಿಯೊಳು ತಿಳಿಯೊ ಅಡವೇಶ ॥೧೫॥

ತೋರುದಕೆ ಶಂಕೆಗಳು ತೋರದಿರೆವಿಡುತಿಹರೆ ।
ವಿರಿಸುವವನೋರ್ವ ವರವಿರಹಿ ಮಾತ್ರವಿರೆ ।
ಕರೆಗೆ ದೂರಹನು ಅಡವೇಶ ॥೧೬॥

## ಕವಿ-ಕಂತೆ

ಮತಿಕವಿಯಃ ಜೀವನದಿ ಸತತದಾಘಾತವಿರೆ ।
ಗತಿಯೊಳಗೆ ನಿಷ್ಠೆ ಬಿಡಲಾರನವನೆಷ್ಟು ।
ಮತಿ ಸ್ವತಂತ್ರ ಗತಿ ಅಡವೇಶ ॥೧೭॥

ದಿವಸ ಗತಿ ನಿರ್ಭಯದಿ ಭವಿಯಗತಿ ಭೀತಿಯದು ।
ಪ್ರವಿಮಲದಯತಿಯ ನಡೆ ನುಡಿಯು ನಿರ್ಭಯವು ।
ಕವಿದೋಷದರ್ಶಿ ಅಡವೇಶ ॥೧೮॥

ಕವಿನೋಟ ಕಲ್ಪನೆಯು ಭವಿಕಾಮಿಗತಿಭಿನ್ನ ।
ವಿವಿಧ ಚಿತ್ರಾಂಗ ಕೃತಿಕಾವ್ಯ–ಭೃಷ್ಟಭವಿ ।
ಕವಿಬಾಳು ಕಷ್ಟ ಆಡವೇಶ ॥೧೯॥

ಸಿರಿ ಶಕ್ತಿ ಬಹುವಿರಲು ಸುರೆ ಕೀಳು ಕೃತಿಗಹುದು ।
ವರಭಾವ ಶಬ್ದ ಸೌಂದರ್ಯ ಸ್ವಾಂತಸುಖ ।
ಪರತೃಪ್ತಿ ಮುಂದೆ ಆಡವೇಶ ॥೨೦॥

ಬರೆದವರ ಕಾವ್ಯವನು ಸಿರಿಯಿಂದ ಕೊಳ್ಳುತಲಿ ।
ವಿರಿಸಿ ತನ್ನಾಮ ಮುದ್ರಿಸುತ ಪ್ರಖ್ಯಾತ ।
ರಿರವ ಕಂಡಿಹನು ಆಡವೇಶ ॥೨೧॥

ಶಿರಗಂಗೆ ಪುಟಿತೆತ್ತ ಸೇರುತಾಬ್ಧಿಯಲತ್ತ ।
ವರಕವಿಯುಗಂಗೆ ಹರಿದು ಭೂಗಗನತ್ತ ।
ನಿರಿಮೆದುಳಿನತ್ತ ಆಡವೇಶ ॥೨೨॥

ಹೆಚ್ಚಳದ ಸುಮಸ್ಥಿತಿಯ ಸ್ವಚ್ಛ ನಿರ್ಭೀತ ನುಡಿ ।
ಯುಚ್ಚ ಸ್ಥಾನದೊಳು ವಿದ್ದಂತೆ ಮತಿಪಾತ್ರ ।
ಸಚ್ಚರಿತ ಮಿತ್ರ ಆಡವೇಶ ॥೨೩॥

ಬರೆವಂಗೆ ಬಲವಿಲ್ಲ ಸರಿಮುದ್ರಣಾಕೃತಿಗೆ ।
ಸಿರಿರಾಶಿ ತೃಪ್ತಿ ಸಿರಿಯಂಗೆ ಬಲವಿಲ್ಲ ।
ಬರೆವ ವರ ಮತಿಯು ಆಡವೇಶ ॥೨೪॥

ಅಕ್ಷಿ-ಮತಿ ಕಂಡಿದುದು ತಕ್ಷಣವೆ ಗ್ರಹಿಸಿ ಲಿಪಿ ।
ತೀಕ್ಷ್ಣ ನಕ್ಷೆಳೆವ ಸೂಕ್ಷ್ಮ ಸುವಿಚಾರಿಯೇ
ದಕ್ಷ ವರ ಕವಿಯು ಆಡವೇಶ ॥೨೫॥

ವಾಮೆಯಾಧೀನವಿರೆ ರಾಮಸುಖ ಸುಖಿಪತೆರ ।
ಭಾಮಿನಿಯ ತತ್ವದಾಜ್ಞೆಯೊಳಗಿರೆ ಕವಿಯ ।
ರಮಣೀಯ ಕಾವ್ಯ ಆಡವೇಶ ॥೨೬॥

ಒರಿಭರಣ ಲಕ್ಷ ಕವಿಗಳಿರವಲ್ಲ ಚರಿತಲ್ಲ ।
ಪುರ ಭಕ್ಷಕ ಭಷಣದಿಂದೊಪ್ಪಿ ಜೀವಿಸಿರೆ ।
ವಿರು ಭಿನ್ನವೇನು ಅಡವೇಶ ॥೨೭॥

ಶಾಂತ ಮಾನಸನಿಂದ ಸ್ವಾಂತ ಸುಖ ಕೃತಿಯಹುದು ।
ಭ್ರಾಂತಿ ಜೀವಿಗಳ ಕೊಂಡಾಡುವಾ ಕಾವ್ಯ ।
ಸಂತೆ ಮಾರಾಟ ಅಡವೇಶ ॥೨೮॥

ಹೃದಯಪ್ರಿಯು ಜನನಿಯದು ಮುದಮುಗುವಿನೆಡೆ ಜಾಸ್ತಿ
ಪದುಳ ಗುರುವಿನದು ಶಿಷ್ಯನೆಡೆಕಿಂತು ಕವಿ ।
ಯದು ಸಹಜ ಪೂರ್ಣ ಅಡವೇಶ ॥೨೯॥

ಅವಮಾನ ನಂತರದಿ ಭುವನ ದೊರಕಿದರೇನು ।
ಸವಿಯಾಗಬಹುದೆ ಚೋರಶಾಬ್ದಿಕ ವರನು ।
ಕವಿಯಾಗಬಹುದೆ ಅಡವೇಶ ॥೩೦॥

ಕವಿ ಹೃದಯಃ ಹೆರೆತ ಘೃತ ಸವಿಯನುಭವಕಾವ್ಯ ।
ಸವಿಗಾರ ಬಲ್ಲ ಸುಹೃದಯ ಸೌಂದರತೆ ।
ಯವಿರತದ ಗತಿಯು ಅಡವೇಶ ॥೩೧॥

ವ್ಯಾಪ್ತ ಭಾವನೆ ಮೂರ್ತಿ ತೃಪ್ತಿಗದು ಕೊನೆಯಿಲ್ಲ ।
ಸುಪ್ತ ಜಾಗ್ರದೀ ಪ್ರಕೃತಿ ಪ್ರಭೆ ಚೇತನತೆ ।
ಬೆಪ್ಪರಿಯನಿದನು ಅಡವೇಶ ॥೩೨॥

ಕವಿ ಸಂಪ್ರದಾಯ ಮಹಕವಿ ಬಲ್ಲ ಪ್ರಭೆಯೆಲ್ಲ ।
ತವೆ ಲಾಭ ಹಾನಿ ಪರಡಿ ತಿಳಿಯುವದೇನು ।
ತೆವಿ ಬಲ್ಲುದೇನು ಅಡವೇಶ ॥೩೩॥

ಮೃಡನ ಭಯರಹಿತನಿಗೆ ನಾಡೊಡೆಯನ ಭೀತಿಯೆ ।
ಮೃಡಹಾರ ತಡೆಯೆ ಕಚ್ಚುತಿರನಿವನಿಂದ ।
ಕಿಡಿಯ ನುಡಿ ಪ್ರಕಟ ಅಡವೇಶ ॥೩೪॥

ಕ್ರೋಧ ನಳಿದಿಹರಾರು ಕ್ರೋಧವೆಲ್ಲರೊಳಿಹುದು ।
ವಿದು ವಿವಿಧ ತೆರದಿ ಪ್ರಕಟವಿರಲವನ ನುಡಿ ।
ಮಧ-ಶಬ್ದದೊಳಗೆ ಆಡವೇಶ ॥೩೫॥

ನರರರಾಯುಷ್ಯವ ಬರೆಯುತಿರೆ ಯಮಧರ್ಮ ।
ಬರೆದ ಕವಿನಾಮ ಕಾವ್ಯಪ್ರಭೆಯಾಯುಷ್ಯ
ವಿರುದೆಷ್ಟು ಬರೆಯೊ ಅಡವೇಶ ॥೩೬॥

ಭಾವಗಳ ಗೂಢತೆಯು ಕಾವ್ಯನೆಲೆ ತಿಳಿಯದದು ।
ಸುವಿಲಾಸ ವನಿತೆಯಾಕಾಂಕ್ಷೆ ತಿಳಿಯದದು ।
ಭವಮಾಲೆಯಮಿತ ಅಡವೇಶ ॥೩೭॥

ರಸ ಮೂರ್ತಿಯಾವಸ್ಥೆ ಶಿಶು-ಸಾಮ್ಯ-ದುನ್ಮತ್ತ ।
ವೆಸೆದು ತೋರುವದು ತದ್ಗುಣದಿ ಮಿನುಗುತಿರೆ ।
ರಸ ಬಿಸಿಯ ಬೆಸುಗೆ ಅಡವೇಶ ॥೩೮॥

ಇಹುದಿವಗೆ ದೃಶ್ಯತೆಯು ಗಹನ ಕಲ್ಪನೆ ಶಬ್ದ ।
ಸಹಜತೆ ಸಮಾಧಿಯಿದು ಹೃದಯ ಝರಿಯಾಗಿ ।
ಮಹತೆ ಜಾಹ್ನವಿಯು ಅಡವೇಶ ॥೩೯॥

ತುಂಗಮಯನಿಗೆಯಣುಕು ಹಿಂಗ್ಯಾಕೊವೆನುದಲ್ಲ ।
ಹೆಂಗಾರ ದೃಷ್ಟಿ ಮನವೋಡಿದೊಡೆಯಲ್ಲಿ ।
ಹಿಂಗದ ಸಮಾಧಿ ಅಡವೇಶ ॥೪೦॥

ಕಂಡಿದುದು ಕೇಳಿದುದು ಕಂಡಾನುಭವದುಕ್ತಿ ।
ಹೊಂಡದೊಳು ಹರಳಿಸೆಯಾ ಸಚಲ ಚಕ್ರ ।
ಕಂಡಂತೆ ಗುಂಡ ಅಡವೇಶ ॥೪೧॥

ಸವೆದ ವಸ್ತುಗಳೆಲ್ಲ ಭೂ ವನಿತೆ ಗ್ರಹಿಸುವಳು ।
ಸುವಿಲಾಸದಂಗ ಕಪಿಸಮೂಹಕೆಯುಂಟು ।
ನವ ಪ್ರಕೃತಿನಿವಗೆ ಅಡವೇಶ ॥೪೨॥

ಬಣ್ಣ ಬಹುವಳಿಯುವವು ಮನ್ಯ ಕಾವಿಯ ಕವಿಯ ।
ಬಣ್ಣ ಹುಣ್ಣುಗಳ ಕಳೆಯುವವು ನೋಟದಲಿ ।
ಸುಣ್ಣ ನಿಷ್ಪಕ್ಷ ಅಡವೇಶ ॥೪೩॥

ದಿವ್ಯ ದೇವತೆಗಳಿಗೆ ದಿವ್ಯಾಸ್ತ್ರ ಬಹಳುಂಟು ।
ದಿವ್ಯ ಮತಿ ಶಸ್ತ್ರ ಕಸಿದುಕೊಳ್ಳುವರಾರು ।
ಕವಿತೆ ಜಯಪತ್ರ ಅಡವೇಶ ॥೪೪॥

ನಿರಭೀಕ ನಿಷ್ಪಕ್ಷ ನಿರ್ಮಲತೆ ನಿಶ್ಚಲನು ।
ಬರಿಯ ಸ್ತುತಿಯನಳಿದು ದೇವ ದೋಷವ ಬಿಡದೆ ।
ಬರೆ ಕವಿಯ ಧರ್ಮ ಅಡವೇಶ ॥೪೫॥

ಹೃದಯದಿಂ ಪುಟಿದ ಹನಿ ಸದರ ಮಾತೆಯಳಿಂದ ।
ಬದಿಯವಳೊಳಿಲ್ಲ ಸ್ವಭಾವಮುದಯ ಪದ ।
ಮದಿಪು ಹೇಳಯ್ಯ ಅಡವೇಶ ॥೪೬॥

ಜಡದಾಂಶನಿವನಿಂದ ಪಡೆಯುವದು ಚೇತಾಂಶ ।
ಬೆಡಗು ಕಲೆಯಾಭಿಸಾರಿಕೆಯ ಬೇಟಕೆಯ ।
ನೋಡು ತೆರೆಯಂತೆ ಅಡವೇಶ ॥೪೭॥

ಯೆತ್ತು ಕೈ ಸತ್ ಸಿದ್ಧಿಯತ್ತ ಜಾಗ್ರದಿಂ ತಾಂ ।
ಯತ್ತಿದಾವ್ಯಾಸ ತೋಳ್ ಬಂಧ ತಿಳಿಸಂದ ।
ಮುತ್ತರಿತು ಮುಡಿಪು ಅಡವೇಶ ॥೪೮॥

ತವೆಕಾವ್ಯ ವನದೊಳಿರೆ ಕವಿಯಲ್ ಪಯೋಧರಂ ।
ಪವಿಕೇಕೆ ಕೂಜನದಿ ತಾನೆ ಕುಣಿಯುತಿಹ ।
ವಿವಿಧ ವೃಜರೂಪಿ ಅಡವೇಶ ॥೪೯॥

ಭಿಕ್ಷೆಯಿಂ ಪಡೆದಿಹನೊ ಭೀಷ್ಮ ಶಾಂತತೆ ಸೃಷ್ಟಿ ।
ತೀಕ್ಷ್ಣ ಹೃದಯವೇ ಕವಿಯಕ್ಷ್ಮ್ರ ಕಂಪನದಿ ।
ಯಾ ಕ್ಷಣದಿ ಸ್ಫೋಟ ಅಡವೇಶ ॥೫೦॥

ಬಹುರಸದ ಬಹುಪಾತ್ರ ಸಹಜಾಭಿನಯ ಶುದ್ಧ ।
ಸಾಹಸತೆ ಸೃಷ್ಟಿವಿನ್ಯಾಸದೊಳುಂಟು ನವ ।
ಸಾಹಿತ್ಯ ದೃಷ್ಟಿ ಅಡವೇಶ ||[illegible]

ಕಾವ್ಯ ವನಿತೆಯ ಮೋಹ ನವ್ಯ ಭಾಮಿನಿ ನೇಹ
ರಿವರೊಳಿಗೆ ಸರಸದಂತರತೆ ಕಾಣುದಕೆ ।
ಕವಿಯ ಸತಿಯಾಗು ಅಡವೇಶ ||[illegible]

ಚೇತನತೆ ಸತಿಯೆತ್ತ ರತಿಕಾವ್ಯ ಸುರತೆತ್ತ
ಸತನಾದನೆದಕೆ ಯಾವ ಸೌಖ್ಯತೆವೆನಲು ।
ಜೊತೆಗಾರ್ತಿಯಾಗು ಅಡವೇಶ ||[illegible]

ವರಣಸತಿಯಾಂತರಿಕದಾ ರಮಣಿ ಜೊತೆ ಬಾಳ್ವಿ ।
ಘೋರದಳರಂಗ ಮತ್ಸರ ವಿಚಿತ್ರ–ಕವಿ ।
ರೀರ್ವರಿಗೆ ಸಾಕ್ಷಿ ಅಡವೇಶ ||[illegible]

ಪಾರಿಜಾತದ ಜಗಳವಿರಲಿಲ್ಲ ಶ್ರೀಕೃಷ್ಣ ।
ಕೊರವಂಜಿಯಾದ ರೀರ್ವ ಸತಿಯರಿಗೆ ಕವಿ ।
ದಾರಿ ದೀಪಾದ ಅಡವೇಶ ||[illegible]

ಕರಣೇಂದ್ರಿ ಪತ್ನಿಯಳುವಿರದ ಭಾವ ಭಾಮೆಯ ।
ವರಣ ಮಾಡಿರ್ದ ಕವಿಗಾವ ಭಯವುಂಟು ।
ಕೊರತೆವೇನುಂಟು ಅಡವೇಶ ||[illegible]

ಪರಮಾತ್ಮಾ ಗಂಗೆಯಳ ಶಿರದೊಳಿರಿಸಿರಲೇನು ।
ಹೊರತೋರ್ಕು ಕವಿರಮಣಿ ಶಿರದಿ ಮರ್ಯಾದೆ ।
ವಿರು ಸೂಕ್ಷ್ಮತರಂಗೆ ಅಡವೇಶ ||[illegible]

ಮೆದುಳು ದಣಿದಿರುವಾಗ ಕದವಿರದ ವಿಶ್ರಾಂತಿ ।
ನದಿ ಸದಾ ಚಲನ ತಡೆಯದಿಹ ಪದಗಹನ ।
ನಾದಮಯ ಹವನ ಅಡವೇಶ ||[illegible]

ನೇತ್ರ ಭಾವೆಯ ಮಥನ ಸೂತ್ರ ಪ್ರಕೃತಿಯವಿಡಿದು ।
ಜಾತವಹರತ್ನ–ಸಮುದ್ರ ಮಥನದ ಬಳಿಕ ।
ರತಿ ಪ್ರಿಯರು ಬಹಳ ಅಡವೇಶ ||೫೯||

ಹೊರಡುವ ವಿಚಾರಕ್ಕೆ ಪರಿಮಿತಿಯು ವಿರಹಿತವು ।
ತೆರೆಮಹತೆ ಚಿಕ್ಕ ಹೊರಗೊಲರುದುರುಳುತಿರೆ ।
ತೆರೆ ಕವಿಯಘೋರ ಅಡವೇಶ ||೬೦||

ಶೃಂಗಾರವಿಡಿದು ಬಹುರಂಗ ಕಾವ್ಯಾತ್ಮ ಗತಿ ।
ಹೆಂಗಾರವಿರಲಿ ಸದ್ವೃತ್ತಿಯೆಡೆಯೊಯ್ವ ।
ತುಂಗ ಸತ್ವವಿಯು ಅಡವೇಶ ||೬೧||

ಬಣ್ಣ ಪ್ರಕೃತಿಗೆ ಹಚ್ಚಿ ಹೆಣ್ಣು ಚೇತನವಿರಿಸಿ ।
ಹಣ್ಣದುರಿದಂತೆ ನಾಟ್ಯನಾಡಿಸುವ ನೆಲೆ ।
ವಿನ್ಯಾರೊಳುಂಟು ಅಡವೇಶ ||೬೨||

ಶಿವ ಜೀವಿಗಳ ಸೃಷ್ಟಿ ಕವಿಸೃಷ್ಟಿ ವೈಶಿಷ್ಟ್ಯ ।
ವಿವರವನು ಹೇಳಿ ರವಿಯಾಗಿ ಹೇಳಿವಿರಾ ।
ಕವಿಯಾಗಿ ಮತ್ತೆ ಅಡವೇಶ ||೬೩||

## ಕಾವ್ಯ ಕುರುಹು

ರತಿ ರಸಾನಂದವಿರೆ ಅತಿಶ್ರೇಷ್ಠ ಕಾವ್ಯನದು ।
ಗತಿವಿಲಕ್ಷಣದಿ ಹೃದಯಾಂತ ನಿಶ್ಚಲತೆ ।
ಸ್ಥಿತಿರೆ ಮಹಾಕಾವ್ಯ ಅಡವೇಶ ||೬೪||

ವರ್ಣನಿರೆ ಬಹುಮಧುರ ಕರ್ಣಕಿರೆಯತ್ಯಂತ ।
ಖಿನ್ನಳಿಸುತ ಪರಮಾನಂದ ಪ್ರಾಪ್ತಿಯದು ।
ಮಾನ್ಯ ಮಹಾಕಾವ್ಯ ಅಡವೇಶ ||೬೫||

ಉದ್ದೇಶವಿರದ ನರರೆದ್ದೇಳರು ಕೃತಿಯೆಡೆ ।
ಸತ್ಪ್ರಯೋಜನೆಯ ಹೊಂದಿರುವ ಮಹಾಕಾವ್ಯ ।
ಶುದ್ಧವೆನಬೇಕು ಅಡವೇಶ ||೬೬||

ಪುರ ಶರದಿ ನಗವಿರಹ ಸುರತಿ ಶಶಿರವಿಯುದಯ ।
ಮೂರಾರುರಂಗ ವರ್ಣನಿರೆ ಕಾವ್ಯೆನುವ ।
ಹಿರಿಯರರ ಹೂಣಿ ಅಡವೇಶ ॥೧೭

ಭೂರಿ ಶೃಂಗಾರ ತೆರೆಬರುತೆ ತಟದೆಡೆ ಸುರವ ।
ವಿರು ಕಾವ್ಯ ಭಾವದುದ್ದೇಶ ಲವಲವಿಕೆ ।
ಸರಣಿಹೊಂದಿರಲಿ ಅಡವೇಶ ॥೧೮

ಕಾವ್ಯ ಶಾಸ್ತ್ರವಸರಿತು ಕಾವ್ಯವನು ಬರೆಯದಿರೆ ।
ಸವಿಹಾಲು ಹುಣಚಿ ಸರಿ ಬೆರಿಸಿತುಂಬಂತೆ ।
ಕಾವ್ಯ–ಕವಿರೂಪು ಅಡವೇಶ ॥೧೯

ಛಂದಸ್ಸು ಬಂಧನ ಸುಗಂಧ ಶಬ್ದಕೆ ಶ್ರೇಷ್ಠ ।
ಛಂದಸ್ಸು ಸತಿಯು ರಸ ಭಾವ ಕೃತಿ ಪತಿಯು ।
ಹೊಂದಿ ಸಂತೃಪ್ತಿ ಅಡವೇಶ ॥೨೦

ಛಂದಸ್ಸುವಿರದ ಕೃತಿ ಗಂಧನಿಜ ಸ್ಥಿರವಹುದೆ ।
ಸುಂದರಿಯ ಮೂಗು ಕೊಯ್ದಂತೆ ಫಲವಹುದು ।
ಛಂದನತ್ತಿತ್ತ ಅಡವೇಶ ॥೨೧

ರಸ ರೂಪು ಸುಗುಣಮಣಿ ರಸಿತೆಯೆಡೆನಯನಮನ ।
ದೊಸತು ಸುಖಭಾವ ಹೃತ್ಪೂರ್ಣ ಸಂಪೂರ್ಣ ।
ರಸ ತೀರ್ಥದೊಳಗೆ ಅಡವೇಶ ॥೨೨

ಮಾತೆ ಮಡಿಲಲ್ಲಿರದ ಸುತನಂತೆ ಪತಿಯುಳಿದ ।
ಸೀತೆ ಪರಿಯಂತು ಹೊಂದಾಣಿಕಿರದ ಬರಿ ।
ಮಾತುಗುಳಿಯಂತು ಅಡವೇಶ ॥೨೩

ಛಂದ ಸಿಂಹಾಸನವು ಹೊಂದಿರುವ ಶಬ್ದರಸ ।
ನಂದದುಂಗುರವು ರಸ ಪ್ರಭೆಯು ಮುಕುಟವಿಡ ।
ಲಂದು ಶೋಭಾಂಗ ಅಡವೇಶ ॥೨೪

ವರಿಲಕ್ಷಣಳಿದ ಕೃತಿಯುರಿ ನಪುಂಸಕನಂತೆ ।
ಸಿರಿಯ ಮಾಂಗಲ್ಯನಳಿದ ಮಾನಿನಿಯಂತೆ ।
ಬರಿದಾದ ಪಾತ್ರೆ ಅಡವೇಶ ॥೭೩॥

ಕವಿತೆ ರತಿ ಸಂಗಸುಖ ಸವಿಯೊ ಪದ್ಧತಿಯಿಂದ ।
ಆ ವನಿತೆಯೋಡಿ ಬರಲು ರಂಡೆನಿಸುವಳು ।
ಭಾವರಿತು ಹಿಡಿಯೊ ಅಡವೇಶ ॥೭೬॥

ಶಸ್ತ್ರ ಜೀತನಗೊಳಲು ಶಾಸ್ತ್ರ ಕವಿತೆಯವಶ್ಯ ।
ಬೀಸಿದಾ ಕವಿತೆಯಿಂ ವೀರರಸ ಪುಟಿದು ।
ಸಿಸ್ತಿನಾಯುದ್ಧ ಅಡವೇಶ ॥೭೭॥

ಅಲ್ಲಿಹುದು ರಕ್ತ ಕಣವಿಲ್ಲಿಹುದು ಶಬ್ದಗಣ ।
ಹಳೆಯ ಹೊಳಪುಳ್ಳ ಕಥೆಯು ದಿನ ಮಥನದಿಂ ।
ದೆಲ್ಲ ಕಣ್ಮುಂದೆ ಅಡವೇಶ ॥೭೮॥

ಹೆಂಡ ಭಂಡದ ಕೊರವಿ ಕೊಂಡಾಡುವಾ ಹೆಳವ ।
ರುಂಡು ಬಡಬಡಿಸಿದಂತೆ ಕೃತಿಗಳು ಬೇಡ ।
ಶುಂಠಿಯುಂತಿರಲಿ ಅಡವೇಶ ॥೭೯॥

ಹಗ್ಗ ಹೊಸೆದಂತಿರಲಿ ಗುಗ್ಗುಳದ ಗಂಧ ಘೃತ ।
ದೊಗ್ಗರಣೆಸಾರ ಸೂಸುತಿರೆ ಜರತಾರಿ ।
ಮುಗ್ಗದಂತಿರಲಿ ಅಡವೇಶ ॥೮೦॥

ನಾದರಸ ವೇದರಸ ವೇದನೆಯ ಸರಸದರು ।
ಣೋದಯು ಸ್ವಪ್ನ ಸಂಚಾರದೋಳ್ ಬಿಡದೆ ।
ಹದ ಪೂರ್ತಿಯಾಗ ಅಡವೇಶ ॥೮೧॥

ವಿರಹರಸವೆಂಥದಿರೆ ಕೊರಯುತೊಂದೊಂದು ಬರೆ ।
ಭರಿತುಸಿರದಿಂದ ತನುಗೆಂಪು ಕಪ್ಪಾಯ್ತು ।
ದರಿವೆ ದಿಪ್ಪಾಯ್ತು ಅಡವೇಶ ॥೮೨॥

ಶಶಿಭಾಷೆ ರಸಭಾವ ಸಸಿಕಳೆ ಹೊಸಾನುಭವ ।
ಕುಸುಮ ಮೃದುದಳವು ಬೀಸುತಿಹುದುಯ್ಯಾಲೆ ।
ರಸಿಕನಿಗೆ ಯೋಗ್ಯ ಅಡವೇಶ

ಕುರುಬಂಗೆವೇನ್ ಗೊತ್ತು ಭರಿತಾಂಗ ಶಬ್ದಾಂಗ ।
ಸರಸಾಂಗದೋಜ ಮಾಧುರ್ಯ ಪ್ರಸಾದತೆ ।
ವಿರಹಪದದೆಸಳು ಅಡವೇಶ

ಮೇರುಕೃತಿವಿರಲೇನು ಪರಮಾರ್ಥ ಸುಳಿದಿರಲಿ ।
ದ್ವಾರವೆಂಥದಿರೆ ಚಿಕ್ಕಗಳಿ ಬೇಕಲ್ಲ
ವಿರಿಸಿರಲು ಸಾಕು ಅಡವೇಶ

ಭೋಗಿಗಳು ರೋಗಿ ನಿಜಯೋಗಿಕುಲ ರಜನಿಯೊಳು ।
ಜಾಗ್ರವಿರೆಯವರ ಕೊಡುಗೆ ಚಿರವೇನು ಕವಿ ।
ಜಾಗ್ರ ಚಿರ ಕಾವ್ಯ ಅಡವೇಶ

ಮೂರು ಕಾಲದಿ ಬಾಧೆವಿರದ ಸತ್–ತತ್ವಿಡಿದು ।
ಹೊರಟ ಭಾವೋಟ ರಸರಂಗ ಘನದೋಟ ।
ಭರಿತ ಸತ್ಕಾವ್ಯ ಅಡವೇಶ

ಸದ್ರಸವು ಸದ್‌ವೃತ್ತಿ ಚಿದ್ರವಾಗದೆ ಹಾಗೆ ।
ಭದ್ರ ಧರಿಸುತಿಹ ಕಾವ್ಯವಂ ನಿಶ್ಚಯಿಸು ।
ಚದಿರಚಿತ್ಕಾವ್ಯ ಅಡವೇಶ

ಸಿದ್ಧಿಗಳು ಬಹಳುಂಟು ಕ್ಷುದ್ರಕೆಲ ಕೆಲಮಹಿವೆ ।
ಸಿದ್ಧಿ ಜ್ಞಾನೊಂದು ಪರಮೋಚ್ಚ ವರಕಾವ್ಯ ।
ಸಿದ್ಧಿ ಬಲು ಕಷ್ಟ ಅಡವೇಶ

## ಸಾಹಿತ್ಯ ಶ್ರೇಣಿ

ಓದಲ್ಕೆವಾದಳಿದು ಸಾಧುಮತಿಯುದಯದಿಂ ।
ದಾದರಿತ ಮಾರ್ಗ ಸೂಚಿಸುವ ಸಾಹಿತ್ಯ ।
ವೇದಸಮವೆನ್ನಿ ಅಡವೇಶ

ಸೋಮಧರ ಸಾಹಿತ್ಯ ರಾಮಣೀಯಕ ಸುಖವು ।
ಕಾಮ ಸಾಹಿತ್ಯ ವಿಮುಖಗತಿವಿದು ಸಿದ್ಧ ।
ಕಾಮದಹನಾಂಗ ಅಡವೇಶ ||೯೧||

ಸಾಹಿತ್ಯ ಬುಧರಿಂಗೆ ಅಹಂಕಾರ ಸಲ್ಲದು
ಸಹದೋಷ ತಿದ್ದಿ ತಿಳಿಸುವಾ ಪಥದರ್ಶಿ ।
ಮಹಸ್ಥಲಕೆ ಯೋಗ್ಯ ಅಡವೇಶ ||೯೨||

ಹೊಸ ಜೀತನಾನುಭವ ಹಸಿತೆ ಮಧು ನಿಶ್ಚಲದ ।
ರಸಭಾವ ಭೀರಿ ದೋಷಳಿವ ಕೃತಿಗೆನ್ನಿಂ ।
ದೆಸೆವ ಸಾಹಿತ್ಯ ಅಡವೇಶ ||೯೩||

ಸಾಹಿತಿಯು ಸಾಹಸಿಯು ಬಾಹುಬಲದಿಂದಲ್ಲ ।
ಮಹತೆ ಮತಿಯಿಂದ ಕಿಂತುಸ್ಥಿತಿ ಸಾಯುತಿಹ ।
ಬಹು ಹಸಿವೆಯಿಂದ ಅಡವೇಶ ||೯೪||

ಅಹ್ಲಾದಕರ ಪವನವುಳ್ಳ ಋತು ಸಿಹಿಪಾನ ।
ಸಲ್ಲಿಸುವ ಶಾಸ್ತ್ರ ಸಾಹಿತ್ಯವನ್ನು ಮೃದು ।
ಮೆಲ್ಲು ಕುಲಕುಲನೆ ಅಡವೇಶ ||೯೫||

ವಿರಹವಧುಕಂಡಾಗ ಪರದೆ ವಧು ನುಡಿದಾಗ ।
ಭರತಿ ಸಂತೋಷ ಸ್ವರುಚಿಯ ಶಬ್ದಶಿಲೆ ।
ವಿರಿಸೆ ಜಯಘೋಷ ಅಡವೇಶ ||೯೬||

ತಿಳಿಯೊ ಸಾಹಿತ್ಯದೊಳು ಸಲಕ್ಷಣ ವಿಲಕ್ಷಣತೆ ।
ಕುಳಿವೆರಡು ವಿಹವು ವಿಲಕ್ಷಣ ಕೃತಿ ವಿರಳ ।
ಸಲಕ್ಷಣ ಕಠಿಣ ಅಡವೇಶ ||೯೭||

ಕಥೆ ಮಿತಿಯು ಬಹುಕಥನ ಮಥನ ಮನದನುದಿನದಿ ।
ರತಿ ವಿಲಕ್ಷಣತೆ ನವನೀತ ಬರದೆ ಬರಿ ।
ಮಿಥುನ ಕೃತಿ ಸಮಯ ಅಡವೇಶ ||೯೮||

## ಕಾರುಣ್ಯ ಕೋಶ

ಕರುಳವೆಲ್ಲರಿಗಿಹುದು ಕರುಣೆವೆಲ್ಲರಿಗಿಹುದೆ ।
ಧರ್ಮ ಸರ್ವರಿಗೆ ಧರಿಸಿರುವ ನರರೆಷ್ಟು ।
ಕರುಣೆ ಕ್ಷ ಕಿರಣ ಅಡವೇಶ ||೯||

ಕರುಣರಸವಿರದ ಕವಿ ಕರಲು ಭೂ ಜವುಳು–ಸವಿ ।
ಯಿರವೊಂದೆ ಸ್ಥಿತಿಯು ಶಶಿವಿರದ ಗಗನ ಮೂ ।
ಗಿರದ ಸೌಂದರ್ಯ ಅಡವೇಶ ||೧೦||

ಮದನಿನಿಯ ಮರಳದಿರೆ ಮುದಿತೆ ಹೃದಯದ ಕೊರಗು ।
ಬದಿ ಸಖಿಗೆ ವೇದ್ಯ ಸುಹೃದಯ ಹಿತನುಡಿಯ ।
ಲದು ಚಿತ್ರ ಕರುಣೆ ಅಡವೇಶ ||೧೧||

ಶರದಿಸಿಂಪಿಯೊಳುದಿತ ಮರೆ ಮಿಣಗುಮಣಿ ಹೊರಗೆ ।
ಮಿರಗುವದು ಜನನಿ ಕವಿ ಹೃದಯ ದ್ರವವೊಮ್ಮೆ ।
ಶಿರಗಂಗೆ ಪುಟಿತ ಅಡವೇಶ ||೧೨||

ಗರ್ಭದೊಳಗಿರು ಮೋಹ ಗರ್ಭೋದಯ ಶಿಶುಕಂಡು ।
ಜಾಗ್ರಸ್ಥಿತಿಯಂತೆ ಪಾತ್ರಭಯ ಕಾಣುತಿರೆ ।
ಕರುಣೆ ಜಲಪಾತ ಅಡವೇಶ ||೧೩||

ಮಗುವು ಮರಣಾದಾಗ ಮಗುವು ತನಗಿರದಾಗ ।
ಸೊಗಸು ಪತಿ ಮೃತ್ಯುವಾದಾಗ ಮರ್ಮಾಂತೆ ।
ಗಗನದಿಂ ದ್ರವಿತ ಅಡವೇಶ ||೧೪||

ವಿರುಮೂಕಿ ಮಾತೆಯೊಳು ದುರಿತ ಪ್ರಾಣಿಗಳೊಳು ।
ತರತರದ ರೀತಿ ಕರುಣ ರಸ ಕೃತಿ ಭಾವ ।
ಹರಿಯುದನು ಕಾಣು ಅಡವೇಶ ||೧೫||

ನೂಪುರದಪಾರರವ ಝುಬ್ ಝುನ್ ಧ್ವನಿಭೂತ ।
ಟಪ್ ಟಪನುದುರುತೆ ಹೃದಯ ದ್ರವವಾಗಿ ಶಿಶು ।
ರೂಪ ನೆನಪಾಗಿ ಅಡವೇಶ ||೧೬||

ನಾಲಿಗಿಲ್ಲದ ಘಂಟೆ ಮೊಲೆ ಹಾಲುವಿರದವಳು ।
ಜಲರಹಿತ ಭಾವಿ ಕರುಣವಿಲ್ಲದ ಕಾಯ ।
ಬೆಲೆಯೇನು ಹೇಳಿ ಅಡವೇಶ ॥೧೦೭॥

## ನಾದ–ನಾಟ್ಯ

ಅಲ್ಲಿಲ್ಲವೆನಬೇಡ ವಿಲ್ಲಿಲ್ಲವೆನಬೇಡ ।
ವೆಲ್ಲರೊಳಗೊಂದು ನಾದವಿರಲೆನ್ನೊಳಗೆ ।
ಸಲ್ಲು ದಾಸೋಹ ಅಡವೇಶ ॥೧೦೮॥

ಬಡಬಡಿಸುತಿಹೆನೆಂದು ಘುಡುಘುಡಿಸದಿರುಪಥಿಕ ।
ನುಡಿವೆಯಾನಂದ ಕೂಸು ನಗುತಿರೆ ತಾಯಿ ।
ಹಾಡುತಿಹಳಲ್ವೆ ಅಡವೇಶ ॥೧೦೯॥

ಹಾಡಿದರೆ ದ್ರೋಹಿಗುಣ ರಾಡಿತೊಳೆದಿರಬೇಕು ।
ವೋಡೋಡಿದಂತೆ ಸುರಿದಂತೆ ಶರಣಗುಣ ।
ಕುಡಿಯೊಡೆಯಬೇಕು ಅಡವೇಶ ॥೧೧೦॥

ಪೂರ್ಣಿಮಾಬ್ಧಿ ತರಂಗ ಪರ್ಣಝರಿ ನದಿ ನಾದ ।
ಕರ್ಣೇಂದ್ರಿಗಿಂಪು ನಿನ್ನೊಳೇನಿಹುದಿಂಪು ।
ಕರ್ಣಗುಣ ಕಂಪು ಅಡವೇಶ ॥೧೧೧॥

ತಂಬೂರಿ ನುಡಿಸಲ್ಕೆ ಶಂಭುಕೃಪೆಯುವಗಾಯ್ತು ।
ಹಂಬಲವು ಬೇಕು ಹುಂಬ ನಿನಗೇನಾಯ್ತು ।
ನಂಬಿಗಿಲ್ಲಾಯ್ತೆ ಅಡವೇಶ ॥೧೧೨॥

ಎರಡು ತಾಳದ ನಾದವೆರಡು ತಬಲಾನಾದ ।
ಕೊರೆದಕಲ್ ನಾದ ಬೇಸುರಿರದಿಹ ನಾದ ।
ವಿರೆ ನಿನ್ನೊಳೇನು ಅಡವೇಶ ॥೧೧೩॥

ನುಡಿದ ನುಡಿ ಗುಮ್ಮಟದಿ ಬಡಿದೇಳು ಸಲಗುಡುಗೆ ।
ಬಿಡಿಸುವವರಾರು ನುಡಿಬಿಡಲು ನಿಶಬ್ದತೆ ।
ಯೊಡನೆ ತಂತಾನೆ ಅಡವೇಶ ॥೧೧೪॥

ಪಡೆಯುದನು ಪಡೆದು ಕುಡಿ ಕೊಡುವದನು ಕೊಟ್ಟನಡಿ
ಗಡಿಗೆಯುಪಯೋಗ ಒಡೆದರೇನುಪಯೋಗಿ ।
ನಾಡಿವಿರೆ ನರನು ಅಡವೇಶ ||೧

ನಟರಾಜ ನಾಟ್ಯದಾ ನೋಟ ಬರಿ ಸುಡಿ ನಾಟ್ಯ ।
ದಿಟನೋಟನಾವ ಕಂಡಿಹನು ಅನಾಹತ ।
ನಾಟ್ಯ ಸರ್ವರೊಳು ಅಡವೇಶ ||೧

ಮೋಡವೇರಿಳಿತವ್ಯೆ ನೋಟವೇರಿಳಿತವೇ ।
ನೋಟದಾ ಭಾವ ವೇರಿಳಿತ ವಿಳಿತೇರು ।
ರಾಟ ಸಮವಿರಲಿ ಅಡವೇಶ ||೧

ರಹಸುದಯಿಸಲು ಸರಸ ವಿಹುದಯ್ಯ ಝುನ್ ಝುನ ನ ।
ಬಾಹುಲ್ಯನಾದ ಬಿಂದುಕಲೆ ಸ್ಪರತೆಯವ ।
ಸಹಿಸುವದುವೆಂತು ಅಡವೇಶ ||೧

ಮೂರು ಘಳ–ದಿನ–ಮಾಸ ನೂರುವರ್ಷದ ಬಾಳ್ವೆ ।
ಮೂರು ನಿಮಿಷದೊಳು ಮರೆಯಾಗಿವೆದುರಾದ ।
ಮೂರಂಕ ನಾಟ್ಯ ಅಡವೇಶ ||೧

ಶಾಂತಿ ಶಬ್ದದಿ ಕ್ರಾಂತಿಯಾಂತರಿಕ್ಷದೊಳಗುಂಟು ಸು ।
ಖಾಂತಾಂಶ ಘಟನೆ ಶ್ರೋತೃಗಳ ಸಂತೃಪ್ತಿ ।
ಸಂತತಿರಿಸುವದು ಅಡವೇಶ ||೧

ಭಾವ ಸಹಜಾನುಭವ ವಿವಿಧವಸ್ಥಾವಯವ ।
ಸವಿಯು ಕಹಿಯುಕ್ತ ಪಾತ್ರಾಭಿನಯು ನಾಟ್ಯ ।
ಜೀವನದೊಳುಂಟು ಅಡವೇಶ ||೧

ಕೊಸರಿ ಕೇಸರಿಯಾಗು ಮುಸುರಿ ಪ್ರಿಯನಾಗದಿರು ।
ರಸಿಕ ಪ್ರಿಯನಾಗು ಸಂಸ್ಕೃತಿಯು ಸ್ವಾರಸ್ಯ ।
ಬಸುರಿ ನೀನಾಗು ಅಡವೇಶ ||೧

ಹಾವಾಗಿ ಹೊರಬರದೆ ಹೂವಾಗಿ ಹೊರಬರುವ ।
ತವಕ ಭಾವದದ ನಾಟ್ಯ ರಸಲೋಕಕ್ಕೆತ್ತ ।
ದೇವಲೋಕಕ್ಕೆತ್ತ ಆಡವೇಶ ॥೧೩॥

ಕಲೆ-ಕೂಟಾನುಭವ

ಶಿಲೆಗೆ ಮಿತಿ ಬೆಲೆಯುಂಟು ಕಲೆಗುಂಟು ಕಥನೀಯ ।
ಶಿಲೆಗುಂಡು ನುಂಗುವಾ ಶಂಖದಯ್ಯನ ಕಲೆ ।
ಯುಳಿಯಬಹುದೇನು ಆಡವೇಶ ॥೧೪॥

ಅನುಭವದರಸ ನಿತ್ಯ ತಣಿವು ಶೀವುತೆ ಶೀರ್ಥ ।
ಸನುಮತಿಯತಾರ್ಥ ಶೀರ್ಮಾಣ ನಿತ್ಯಗತಿ ।
ಪ್ರಣತಿಯೆ ಸಾಕ್ಷಿ ಆಡವೇಶ ॥೧೫॥

ವಿದುಶಃಕ್ತಿ ರಜತಲ್ಲ ವಿದುರಜ್ಜು ಯುರಗಲ್ಲ ।
ಸದರದನುಭಾವಿಗೆಲ್ಲಿಯದು ವಿಭ್ರಾಂತಿ ।
ನೆದರ ನಿಜವಿರಲು ಆಡವೇಶ ॥೧೬॥

ಕೌದಿಯೊಳು ಕಲೆಯುಂಟು ಹಾದಿಯೊಳು ಗಶಿಯುಂಟು ।
ಹಾದಿಗೊಗೆದಿರುವ ವಸ್ತುಗಳದುಪಯೋಗ ।
ಬದಿಯೋರ್ವಗುಂಟು ಆಡವೇಶ ॥೧೭॥

ಕಾಲಗತಿಯಂತೆ ಕಲೆ ಲೋಲೆಮತಿಯಂತೆ ಕುಲ ।
ಹಾಲು ಕುಡಿದಂತೆ ಬಲವುಂಟು ಬಲದಿಂದ ।
ಕೊಲೆಯಾಗಬಾರ್ದು ಆಡವೇಶ ॥೧೮॥

ಸಲುಗೆ ಬಾಲೆಗೆ ಕೊಡದು ಕಲೆಗೆ ಪ್ರತಿಬಂಧಿಡದು ।
ಬಲವರಿತು ಬಾಳದಿರೆ ಮೂರ್ಖ ಮಹಿಷಿಗಳ ।
ಮೊಲೆಯ ಕೊಯ್ದಂತೆ ಆಡವೇಶ ॥೧೯॥

ತಂತಿಯೊಳು ಧ್ವನಿಯಂತೆ ಸ್ವಾಂತ ಸುಖಗಹನಂತೆ ।
ಕಂತುವಿನ ಕಾಟ ಕಾಣದಿರದಂತೆ ಕಲೆ ।
ವಿಂತು ಪ್ರಜ್ವಲಿತ ಆಡವೇಶ ॥೨೦॥

ಕಲೆ ನಾಟ್ಯ ಕವಿಗಳರ ಬಾಳುವೆಯು ಕುಳಿಯಂತೆ ।
ಒಲಿದಿರುವ ಸತಿಯ ಶೃಂಗಾರ ಸುಖವೆಂತೊ ।
ಬಳಿಸುಳಿಯಲರಿವು ಅಡವೇಶ ||ಅ

ತಂಬೂರಿ ಶಿಲೆಯೊಳಗೆ ತುಂಬಿಟ್ಟ ಚೇತನತೆ ।
ಹಂಬಲಿಡುತಲ್ಲಿ ವಿರಹಾಗ್ನಿಯೊಳು ಬೆಂದ ।
ಕಂಬನಿಯಳಿಲ್ಲಿ ಅಡವೇಶ ||ಅ

ಕಲೆಯೇನು ಕಲೆಯಹುದು ಕಲೆಯು ಕೂಟಾನುಭವ ।
ಚಲು ಪ್ರಕೃತಿ ಸಂಧಿ ಗರ್ಭಧರಿಸುತ ಶಿರದ ।
ನೆಲೆಯಿಂದ ಪ್ರಕಟ ಅಡವೇಶ ||ಅ

ಸಾಂಧ್ಯ ಶೋಭಾ

ಸಾಂಧ್ಯ ಶೋಭೆಯ ನೋಡು ಸಿಂಧೂರವಿಟ್ಟಿಹಳು ।
ಮುಂದು ಮೇಲೆಲ್ಲ ಕಿರಣೆಡೆಯ ಮಾಲೆಗಳ ।
ಸಂದ ನೀ ಬೇಡು ಅಡವೇಶ ||ಅ

ಭೂ ಗಗನ ಪರಿಪೂರ್ಣ ಸೊಗಸುಪಟಧರಿಸಿದಾ ।
ಯೋಗಿನಿ ವಿರಾಟ ರೂಪಧರಿಸಿಹಳೇನೋ ।
ಸಾಗುತಿಹಳ್ಯಾಕೆ ಅಡವೇಶ ||ಅ

ಉದಯಾಸ್ತ ಸಮಯದೊಳು ಕಾದುಕುಳಿತಿಹುದೇಕೆ ।
ಆ ದಿನಗಳಿಂದ ಕೇಳುವವರಿಲ್ಲೇನು ।
ಈ ದಿನದವರೆಗೆ ಅಡವೇಶ ||ಅ

ಏನಿಹುದು ಉದ್ದೇಶವೇನು ಬೇಕಾಗಿದೆಯೋ ।
ತಾನು ವೇಕಾಕಿ ಯಾವ ಪುರುಷನಿಗಾಗಿ ।
ಅನುದಿನದ ಶೋಧ ಅಡವೇಶ ||ಅ

ಕೇಳು ಪೂರ್ವದಿ ಹೇಳು ಮೂಲವೇದ ವಿಚಾರ ।
ಸುಳಿಯರಾರಿಂದ ತಿಳಿದೆ ಹೇಳುತವಳೆಡೆ ।
ಸುಳಿಯೊ ಪೂಜಾರ್ಥ ಅಡವೇಶ ||ಅ

ಕೂಗುತಿವೆಯನುದಿನವು ಯುಗಣಿತಂ ಪಶುಪಕ್ಷಿ ।
ರಾಗ ಸಂದೇಶ ತಿಳಿದು ತಿಳಿಸುತ ಮರಳಿ ।
ಕೂಗುವವರಾರು ಅಡವೇಶ ||೧೩೯||

**ಸದ್ರಸ-ಚಿದ್ರತಿ**

ಎಣಿಕಿರದ ಕಲ್ಪನೆಯಃ ಕುಣಿಯುತಿಹುದನು ಕಂಡು ।
ಜ್ಞಾನಶಕ್ತಿಯೊಳು ಚಿತ್ ಸನ್ನೆಯಿಂ ಸೆಳೆದ ।
ಳನುವಿನಿಂದೆನ್ನ ಅಡವೇಶ ||೧೪೦||

ನಾನು ಗಾಬರಿಯೊಳಿರೆ ಘನ ಗುರುವು ಮಧ್ಯಸ್ಥ ।
ತಾನಾಗಿ ಬಂದು ಪರಿಚಯಂ ಮಾಡಿಸಲು ।
ಸನಿಹದಾತ್ಮೀಯ ಅಡವೇಶ ||೧೪೧||

ನಾನೋಡಲವಳನ್ನು ತಾನೋಡಿ ನಗುತಿಹಳು ।
ನಾನೋಡದಿರಲು ತಾನೆ ತಾಂ ನಗುತಿಹುದ ।
ನಾನೇನು ಬಲ್ಲೆ ? ಅಡವೇಶ ||೧೪೨||

ಇದಕೆ ಸಂಶಯವೇಕೆ ಚಿದಕ್ಷಿಯ ಚಿರನೋಟ ।
ದೊದವಿ ಬಿರಸುಭದ ತನ್ನೆರಳು ನೋಡದಿರೆ ।
ಬದಿಹಿಂದೆ ಬರದೆ ಅಡವೇಶ ||೧೪೩||

ಚಲುವಿಗಿರದಾಗಮನ ಚಲನ ಚಂಚಲ ಚರಣ ।
ನಿಲವು ನಿಶ್ಚಲದ ಗಮಕವಹ ಗುಂಜಾರ ।
ಲಲಿತೆಂತು ಕಥನ ಅಡವೇಶ ||೧೪೪||

ತಡೆಯಲಾರದೆ ಕಾಮಿ ಮಡದಿಯಳಕೊಂಡಾಡಿ ।
ಪಡೆವಂತೆ ಸವಿಯ ಪಡೆಯುತಿಹೆ ತಡೆಯಿರದ ।
ಹಾಡು ಹಾಡುತಲಿ ಅಡವೇಶ ||೧೪೫||

ಮೂರವಸ್ಥೆಯೊಳು ಮುಗುದೆ ಸರಿಯಾಗಿವಿರುತಿಹಳು ।
ಮೂರರೊಳುವೆನ್ನ ವ್ಯವಹಾರ ಭಿನ್ನವಿರೆ ।
ವಿರುವಳ್ಳೆ ಸಾಕ್ಷಿ ಅಡವೇಶ ||೧೪೬||

ನಾದಸ್ಮಿತೆ ಚಿದ್ರಸೆಯುಳಾದ ಪೂರ್ಣತೆಯುವಳ ।
ನಾದದೊಳು ನಿತ್ಯ ಹೃದಯಧರವೇಕಸ್ಥಿತಿ ।
ಯಾದರಸಿಕಾನು ಆಡವೇಶ ||[illegible]

ನಿಜದ ಋತೆ ಜೊತೆವಾದ ವೋಜದಿರೆ ನಾ ಸೋತು ।
ವಿಜಯಳಾಧೀನ ನಾನಾಗುತವಳಾದೆ ।
ಸಾಜದೇಕರಸ ಆಡವೇಶ ||[illegible]

ಮೊದಲಿವಳನಂದದಾಲ್ಹಾದಕತೆ ಮುಖಪ್ರಭೆಯು ।
ಮೊದಲಿದುವೆಯೆಂದು ನುಡಿಬಲ್ಲೆ ನೆಲೆಗೊಂಡು ।
ವಿದುವೆ ನಿಜ ಮುಂದು ಆಡವೇಶ ||[illegible]

ಅಲುಕಡೆವೆಯೊಳು ಮಾತುಗಳ ಹೇಳಬೇಕೆಂತೊ ।
ದಲಕುವ ತರಂಗ ಲೋಲೆಯೊಳು ಲೀನವಿರೆ ।
ಯುಲುಕುವೇನಿಲ್ಲ ಆಡವೇಶ ||[illegible]

ನೀನೆಂದೊ ನೀನಿರಲು ನಾನಿಂದು ನೀನಾದೆ ।
ವೇನೆಂದು ಕರವೆ ನಿನ್ನೊಳಡಗಿರುವಾಗ ।
ನಾನೇನುವೆಂದೆ ಆಡವೇಶ ||[illegible]

ಆತ್ಮರತಿಯಾತ್ಮ ಕ್ರೀಡಾತ್ಮಪಟುವಾಗು ಶ್ರುತಿ ।
ಖ್ಯಾತದುದ್ಘೋಷವಿರೆಯಿತ್ತ ನರನಾರು ।
ದಾತ್ಮರತ್ಯಾರ್ಥಿ ಆಡವೇಶ ||[illegible]

ಮರೆಯಲಾರೆನು ಪೂರ್ಣೆ ಮರೆತರಾಂ ಮರೆಯದಿರು ।
ವಿರಹಿ ಸ್ವಪ್ನದೊಳು ವಿರಹಿಣಿಯ ರುಚಿಹರಣ ।
ಹರಿಸು ಹೃದಯ ಹನಿ ಆಡವೇಶ ||[illegible]

ಇರದು ಸ್ವಪ್ನಾವಸ್ಥೆ ಚಿರಜಾಗ್ರ ಚೇತನವೆ ।
ಪರಿವಿರುವ ಸ್ಮಿತಳೆ ವಿಡುವೊಂದೆ ಸ್ಥಿತಿಸಿಜದಿ ।
ಸ್ಮರಣ ಪಿಡಿದಿರುವೆ ಆಡವೇಶ ||[illegible]

ಚಿರಮುಗ್ಧೆ ನೀನಲ್ವೆ ಚಿರನಾಯ್ಕ ನಾನೆಂತೊ !
ವಿರಲು ಸ್ಥೂಲಕ್ಕೆ ವೃದ್ಧತೆಯು– ಸ್ಥಿತಿಗಲ್ಲ ।
ಪರ್ಣ ಜೊತೆ ರಸವು ಅಡವೇಶ ||೧೫೫||

ಸ್ಥಿರಭಾವೆ ಸರಸೊಂದು ನಿರ್ಮಲ ನಿರಂಜನತೆ ।
ಭರಿತೆ ಸುಖಿಶೋಭೆ ಶೋಭಾಯವೆನಗಿಹಳು ।
ಸ್ಥಿರ ಸನ್ನೆಯೊಳಗೆ ಅಡವೇಶ ||೧೫೬||

ಕೂಟಸ್ಥ ಸ್ಥಿತಿವಂತೆ ಮಾಟಳಿಸುತಂ ಪ್ರಿಯ ।
ದಿಟನೋಟ ಹರ್ಷ ಹಗುರದಿಂ ತನ್ನೊಳಗೆ ।
ಸಾಟವಿರಿಸಿದಳು ಅಡವೇಶ ||೧೫೭||

ಸನೇಹದಿ ಕಲೆದಾಗ ನೀನಾವ ರಸ ಪ್ರಕೃತಿ ।
ನಾನಾವ ಪುರುಷ ನಾನಾಗ ವಿಸ್ಮೃತಿಯು ।
ನೀನೆಂತು ಹೇಳೆ ಅಡವೇಶ ||೧೫೮||

ಇದುವೆಂಥ ನಮ್ಮಿರ್ವರಿದು ವಿರಕ್ತಿಯ ರಕ್ತಿ
ಮಧುರೆ ನಾನಾದೆ ಚದುರ ನೀನಾದೆಯೋ ।
ಬಡಲಾಗಿ ನೋಡು ಅಡವೇಶ ||೧೫೯||

ಅಳಿದು ವ್ಯಭಿಚಾರತೆಯ ಸುಳಿದಿರುವೆ ಚಿರಜಲದಿ ।
ಸುಳಿವ ಮತ್ಸ್ಯಾಗಿ ಪ್ರತಿಬಂಧಕಗಳಿಂದ ।
ಸಿಲುಕಿರದೆ ಸ್ಮರಣ ಅಡವೇಶ ||೧೬೦||

ವಿರಲೊಲುಮೆಯೆಮ್ಮೊಳಗೆ ವೆರಡೆಂಬುದಳಿಸಿತೋ ।
ತೆರೆ ಸ್ತಬ್ಧ ನಿರ್ವಿಕಲ್ಪತೆಯ ಕಂಗಳೊಳು ।
ಯಾರ ರುಚಿಮೇಲು ಅಡವೇಶ ||೧೬೧||

ಸಾಮಾನ್ಯ ಹದವಳಿದಸಾಮಾನ್ಯ ಸ್ವಚ್ಛಂದ ।
ಕಾಮನಿಃಕಾಮ ಗುಣಿಯ ವ್ಯಭಿಚಾರದಿ ।
ಕಾಮಜಿತವಹುದು ಅಡವೇಶ ||೧೬೨||

ಕುಂಚಿಡಿದು ಸಾಗಲಾ ಕುಂಚನಾಯಿತು ಕುಂಚ ।
ಕಂಚು ಕಾಂಚಲವ ಸರಿಸಿಕಾಣಲು ಗೂಢ ।
ದಿಂಚರದನಾದ ಅಡವೇಶ ||೧೬೩

ನಾನಿರಲು ನೀ ಬೇಕು ನಾನಿರದೆ ನೀನಿರುವಿ ।
ನಿನಾರಿಗಿರುವಿ ಮಧು ನೀನು ರುಚಿಯಾನು ।
ನೆನೆಸು ಮೊದಲಾರು ಅಡವೇಶ ||೧೬೪

ಬಲುಶಾಂತೆ ಕಲೆಕಾಂತೆ ಫಲರಹಿತೆ ಋತುರಹಿತೆ ।
ಬಲಭರಿತೆ ಖ್ಯಾತೆ ಪರಿಪೂರ್ಣ ಪರಿಪಕ್ವ ।
ಸಲುಗೆ ಸಾಲದದು ಅಡವೇಶ ||೧೬೫

ಕಿರಣ ಪವನ ಸಹಾಯದರಿತು ಕೂಡಿತು ಕೀಟ ।
ಸರಲರಜಗಂಧ ಸಂಧಿಸೊ ಪಂಚಿಸಳ ।
ದೊಳಗೆಯಜಗಂಧ ಅಡವೇಶ ||೧೬೬

ನಿರಿನಿರೀಕ್ಷಣೆ ನಿತ್ಯ ನಿರತ ಪರಿಶುದ್ಧಿಯಳ ।
ಮರೆಯುವದಸಾಧ್ಯ ಸಾಪೇಕ್ಷೆ ಹೊಯ್ದಾಟ ।
ನಿರಪೇಕ್ಷೆ ಕಠಿಣ ಅಡವೇಶ ||೧೬೭

ನಿರಪೇಕ್ಷೆ ಸಾಪೇಕ್ಷೆ ವೆರಡಳಿದ ಮುದಶಕ್ತಿ ।
ವರ್ಣಿಸಲಸಾಧ್ಯ ಮನವಾಣಿಗಗೋಚರ ।
ದಿರವೆಂದು ಶ್ರುತಿಯು ಅಡವೇಶ ||೧೬೮

ಮನನೀಯ ಗಂಭೀರೆ ಘನ ಸುಖದ ಶೃಂಗಾರೆ ।
ತನಿಯ ಗುಹವೋರೆ ಚಿಚ್ಛಕ್ತಿ ನಿನನಾಮ ।
ದನುಭೂತಿವೆನಲೆ ಅಡವೇಶ ||೧೬೯

ಮನವಿರುವ ಮುದವಳಿಗ ಮನವಳಿದ ಮುದುವಳಿಗೆ ।
ಯನುರಂಜನೆಂತೊ ನಿರ್ಗುಣಿಯುಳನುಗಾಲ ।
ದಿನಿವಾತುವೆಂತೊ ಅಡವೇಶ ||೧೭೦

ತನುವಿಂಗೆ ಮುದ್ದುಂಟು ಮನವೊಲಿಸುವಿಕೆಯುಂಟು ।
ಮನಬಂದ ಚೇಷ್ಟೆ ವೇನುಂಟುವೇನಿಲ್ಲ ।
ತನುರಹಿತೆಗುಂಟೆ ? ಆಡವೇಶ ||೧೭೧||

ನಾನೆನಲು ಕೆಡಕುಂಟು ನೀನೆನಲು ಸುಖವುಂಟು ।
ನಾನೆನ್ನ ರಮಣಿ ರಮಣ ಪ್ರೇಮದಿ ಭಂಗ ।
ವೇನೆನುವಿ ನೀನು ಆಡವೇಶ ||೧೭೨||

ಏನುಡಲಿ ತಿನಲೇನು ವೇನೆಲ್ಲಳಿಹಳವಳೆ ।
ವೇನಿಡಲಿ ಬಿಡಲಿ ಯಸಾಮಾನ್ಯ ಸಜ್ಜಿಕೆಯ ।
ಳನಿವಾರ್ಯ ಸುಖದಿ ಆಡವೇಶ ||೧೭೩||

ಕಲಕುವಾ ಕಲೆಯಾಗಿ ನೆಲೆಗೊಳ್ಳದಿಹ ಚಲುವೆ ।
ಸೌಲಭ್ಯ ಬಿಂದು ಬೀಳ್ಕೊಡುವ ಮನಸಿಲ್ಲ ।
ಬೀಳ್ಕೊಡುವದೆಂತು ಆಡವೇಶ ||೧೭೪||

ಸತಿಶಕ್ತಿ ಅಳಿಯುತಲಿ ಜೊತೆಗಾರ್ತಿ ಬೆನ್ನಿಡದ ।
ಗತಿಗೇಡಿಯಂತೆಯಾಗದಿರು ಚಿದ್ರತಿಯು ।
ಗತಿಕೊಡುವಳಯ್ಯ ಆಡವೇಶ ||೧೭೫||

ವಿರಹ ! ನಿನಗೊಂದನಂ ವಿರಲು ನೀಂ ನೆನಸಿವಳು ।
ಕರಣವನು ಮೀರಿ ಸ್ಮರಣದೊಳುವಿರೆ ತೃಪ್ತಿ ।
ವಿರೆ ಕೊರಗು ರಹಿತ ಆಡವೇಶ ||೧೭೬||

ವಂದನೀಯತೆ ವಿರಹ ಸುಂದರಿಗೆ ಸಹಸೌಖ್ಯ ।
ಚಂದ್ರ ಸುಂದರಿರೆ ಚುಂದಿ ಪಾತ್ರತೆ ವಹಿಸಿ ।
ಬಂದಿಹುದು ವಿಜಯ ಆಡವೇಶ ||೧೭೭||

ನಿರುಪಾಧಿಯುಪಾಧಿಯಧಾರೆ ವಿದಕಿಹುದಯ್ಯ ।
ಧರಿಸಿರಲುಪಾಧಿ ಬಂಧನತೆ ನಿರ್ಬಂಧ ।
ನಿರುಪಾಧಿ ವಿರಹ ಆಡವೇಶ ||೧೭೮||

ಬಳಿಬಿಡಲು ಬಳಿನಡೆದೆ ಕಳವಳಿರದಿಹ ಜಲನ ।
ನಿಲಿಸುತೆವೆ ಚಲನ ಸಂಧಿ ರಸ ಹನಿಯಿಂದ ।
ಜಲತರಂಗ ಝುನ ಅಡವೇಶ ||ಅ

ನಾಟ್ಯವಾಡೋಣ ಬಾ ದಿಟ ಚಕ್ಷುಮಂದಿರೊಳು ।
ನಾಟ್ಯ ನಡೆಸಿರಲು ಸಾಟಿ ಪ್ರೇಕ್ಷಕರಿಲ್ಲೆ ।
ದಾಟೋಣ ಬಾರೆ ಅಡವೇಶ ||ಅ

ವೃದ್ಧಿ ಸಾಂತತೆಯುಕ್ತ ಮುದ್ದು ಮಂಗಲೆಯಲ್ಲ ।
ಸಿದ್ಧ ಶುಭ ಶೋಭೆ ಮುಗ್ಧೆಯನ್ನೊಳಗಿಹಳು ।
ಸದ್ದಿರದೆ ಕುಂಭ ಅಡವೇಶ ||ಅ

ಏರಿಳಿತ ಕಲೆವಿರದ ಸರಜ ನಿಜ ಋತಸಿದ್ಧ ।
ಕರಣ ಮೀರಿಹಳ ಕರೆಯದೇ ವಿರುವವಳ ।
ಸ್ವರ ಚರಣವೆಂತು ಅಡವೇಶ ||ಅ

ಝುಗ ಝುಗತೆವೆದುರಿನೊಳು ಝುಗಝುಗತೆ ಹೃದಯೊಡೆ
ದೊಗತನ ಮಿಗಿಲು ವಿಲಕ್ಷಣೆ ವಿನೋದಿನಿಯೆ ।
ರಾಗದಿ ವಿರಾಗಿ ಅಡವೇಶ ||ಅ

ಮುದ್ದೆ ಹತ್ತಿಯ ಪ್ರಸರದುದ್ದಗಲ ವೃದುಸೂಕ್ಷ್ಮ ।
ಮುದ್ದು ಸದ್ದಿರದ ರಸಗುಪ್ತ ಭೋರ್ಗರೆಯು ।
ತಥ್ಯಾಸ ರಹಿತ ಅಡವೇಶ ||ಅ

ಹಟಮಾರಿ ಸತಿಯೋಗದೂಟ ಬಿಡುತಿಹರೇನು ।
ಹಟಮಾರಿ ರಸಿಕ ನೀನಿದನು ನೋಡದಲೆ ।
ಯೂಟದೊಳ್ ವಿರಿಸೆ ಅಡವೇಶ ||ಅ

ಪತಿದುಷ್ಟನಾದೊಡೆಂ ಪತಿಪ್ರೇಮ ನಳಿದಿಹಳೆ ।
ಜೊತೆಗಾರ ದುಷ್ಟನೆನಿಸಿದೊಡೆ ದೂಡದಿರು ।
ಜೊತೆಯಾಡುತಿರು ಅಡವೇಶ ||ಅ

ಎನಿತೋ ಜನುಸಂಸ್ಕಾರ ಮನ ಓಡಿದೊಡೆಯಲ್ಲಿ ।
ನೀ ನೋಡುತಲ್ಲಿ ನೀನಿಂತಿರು ನಿಜದಲ್ಲಿ ।
ಸನಮೂನ ಸದನೆ ಅಡವೇಶ ॥೧೮೭॥

ಬೂದಿ ಮುಚ್ಚಿರಲಗ್ನಿ ಬದಿಹೋದೆ ಘೃತವಾಗಿ ।
ಬೂದಿ ಭೇದಿಸುತ ಪ್ರಜ್ವಲಿತೆ ಪ್ರತಿಷ್ಠಿತೆ ।
ಮದ ಮರಳಿಸಿದಳು ಅಡವೇಶ ।೧೮೮॥

ಬೇಡಾದೆ ದುರುಳರಿಗೆ ಬಿಡದೆನೆಗೆ ಬೇಕಾದೆ !
ಬೇಡಾದ ಬೂದಿ ಶಿವಗೆ ಭೂಷಣವಾಯ್ತು ।
ಕೂಡಿಯೋಡದಿರು ಅಡವೇಶ ॥೧೮೯॥

ಸೌಂದರ್ಯಕುಸುಮಗಳ ಸಂಧಿಸುವವರಿರಬೇಕು ।
ಬಿಂದು ಜೊತೆ ಕಿರಣ ಘ್ರಾಣಿಸುವವರಿರದೆ ನಿನ ।
ಗಂಧ ಬೆಲೆಯೇನು ಅಡವೇಶ ॥೧೯೦॥

ಫಲವುಂಬುತಿರುವಾಗ ಬಳಿಯವಳು ನೋಡುತಿರು ।
ದೊಲವು ನಾನರಿಯೆ ಗುರುವು ಹೊರಳಿಸಿದಂದು ।
ಶೀಲೆ ಕಲೆಯೊಳಗೆ ಅಡವೇಶ ॥೧೯೧॥

ಓ! ಸಖನೆ ಯೆನ್ನ ಸಖಿ ಸೂಸುನಗೆ ತೋರಿಸುವೆ ।
ಹೊಸಬ ನೀನಲ್ವೆ ನಿನಗೆಂತು ದೋರುವಳು ।
ಹಸನಾಗಿ ಬಾರೊ ಅಡವೇಶ ॥೧೯೨॥

ಬಿಸಿಯಾಗಿ ಬರಬೇಡ ಹಸಕಾಗಿವಿರಬೇಡ ।
ಕಸರುವಿರೆ ಸಲ್ಲ ಮುಸಕಾಗಿರಲುವಿಲ್ಲ ।
ರಸಿಕಾಗಿ ಬಾರೊ ಅಡವೇಶ ॥೧೯೩॥

ನಾಚಿಕಿರುವವಗಿಲ್ಲ ರೋಚನಳಿದವಗಿಲ್ಲ ।
ಲಚ್ಚಿನಂಬಿದವಗೆನಿತಿಲ್ಲ ಹಸನ್ಮುಖಿಯ ।
ದಚಲದಧರಾಂಗ ಅಡವೇಶ ॥೧೯೪॥

ಮೃಗಜಲಕೆ ಬೊಗಸಿಡಿದು ಬಗರಿಸಮ ತಿರುಗಿದೆಯಾ ।
ಬಗೆಬಾಳು ಬಳ್ಳಿ, ಹಾಳುಮಾಡದಿರುದನು ।
ವಾಗಿ ವರಿಸವಳ ಆಡವೇಶ ॥೧

ತೊರೆದವಳ ಗತಿಸದಿರು ಮರಗುತಲಿ ಮರಳದಿರು ।
ವೆರಡಕ್ಕೂ ಸಾಕ್ಷಿ ಯಿರುವವಳ ಮೊರೆ ಹೋಗು ।
ಮರುಗದಿರು ಸಖನೆ ಆಡವೇಶ ॥೧

ಕುಲಕುಲನೆ ನಗುವನೆಲೆ ಬಲುಹ ಕಾಣಲು ಸಖನೆ ।
ಒಲಿಸಿಕೋ ಬೇಗ ಕಂಚು ಕಾಂಚಲವಿರದ ।
ಶೀಲೆಗೊಲಿ ಬೇಗ ಆಡವೇಶ ॥೧

ತಲೆಯಿಲ್ಲದವಳಿಂಗೆ ಮಾಲೆವೆಲ್ಲಿರಿಸುವಿಯೊ ।
ಬಲವಾದ ಮಾರ್ಗ ಪರಿಯೇನು ಸಲ್ಲಾಪ ।
ಸುಳಿಶೋಧನೆಂದು ಆಡವೇಶ ॥೧

ಹರಿಯಜರು ಕಾಣದಿಹ ಧರಿಸಿರು ವಿರಾಟ್‌ರೂಪ ।
ನರನಾವನರಿವ ನರಿಯುದಕೆ ಸ್ಮೃತಿಸೂತ್ರ ।
ಸ್ಮರಣೀಯವಹುದು ಆಡವೇಶ ॥೧

ಹೇಳುತಿರಲಾಂ ಕಿಂತು ಕೇಳುತಲೆ ಕುಳಿತೆಯಾ ।
ಬೆಳಗುವಧು ಚಿಹ್ನ ಗುರುತುನಿನಗೆನಿತಿಲ್ಲ ।
ಹೇಳು ಗುರುಪಿತಗೆ ಆಡವೇಶ ॥೨

ವಧುವ ಸಂಶೋಧನೆಗೆ ಮದವಿಷಯಿಗುಣವಿರದ ।
ಸದಯುಗುರುವಿಂಗೆಯೊಪ್ಪಿಸಲು ದಾಂಪತ್ಯ ।
ಹದಹ್ಲಾದ ಹಂಸ ಆಡವೇಶ ॥೨

ಸೂತ್ರದಿಂ ಜೋಡಿಸುವ ಸೂತ್ರಕಂಕಣದಿಂದ ।
ಮೈತ್ರಿಮಾಡಿಸುವ ಹರಿದು ವಿಪರ್ಯಯ ಪರದೆ ।
ಕ್ಷೇತ್ರಜ್ಞ ಸತ್ಯ ಆಡವೇಶ ॥೨

ಸುರಸ ಸಾಪೇಕ್ಷೆಯದಿ ಗುರುವೆ ಮಧ್ಯಸ್ಥ ಹನು ।
ಚಾರು ಸುರುಚಿಯಳ ಕರಣೇಂದ್ರಿಯಳಿದ ಬೆದೆ ।
ತೋರಿಸಲು ಬರದು ಅಡವೇಶ ॥೨೦೩॥

ಸರಸ ಸುಮದೆಲೆ ಮೇಲೆ ವಿರದು ಹನಿ ನಿಲದೆನಿತು ।
ವರವಧುವ ನಾಟ್ಯ ರಮ್ಯಮಂದಿರದೊಳಗೆ ।
ಹಿರಿಯರಿಹರೇನು ಅಡವೇಶ ॥೨೦೪॥

ಚಲುವೆಯಳ ನೀ ಕಂಡು ಮಾಲೆ ಹಾಕುವೆನೆನಲು ।
ಬಿಳಿಬಣ್ಣ ಹಾಲು ಹಾಲೆನದು ರಸಗಳ್ಳಿ ।
ಹಾಲು ಕುಡಿಯುವಿಯೊ ? ಅಡವೇಶ ॥೨೦೫॥

ಹಿರಿಯರನುಭವಸ್ವಾದ ಸಿರಿಯಗಳಿಸಲುವಹುದೆ ।
ಚರಿಸು ಹೆಜ್ಜೆಯೊಳು ನಿತ್ಯದಿಂ ನಿನಗಾಗ ।
ಸುರಿದು ಬರುತಿಹುದು ಅಡವೇಶ ॥೨೦೬॥

ಒಂದು ಸಮಯದಿ ನಿನ್ನ ಸುಂದರಿಯ ನೋಡಲಿಕೆ ।
ಮುಂದುಕಳಿಸಿದರೆ ಚಂದಗಾರ್ಢಭಮರಿಯೆ ।
ಅಂದವೆನಬಹುದು ಅಡವೇಶ ॥೨೦೭॥

ಒರಿಬಾಹ್ಯರೂಪದಿಂ ಸರಿವೆನಲುವೆನದಯ್ಯ ।
ಹೊರತಗದ ಬೀಜ ಪುಂಡಿಯುಳ್ಳಾಗಡ್ಡಿ ।
ನಿರೀಕ್ಷಿಸಲೊಂದು ಅಡವೇಶ ॥೨೦೮॥

ಸಾಕಾರಗುರುವರ ನಿರಾಕಾರ ವೇದನೆಯ ।
ಸುಕುಮಾರಿಕರದಿ ಕರವಿರಿಸೆಯಾಂತರಿಕ ।
ನಕಲು ಭಯಲುಪ್ತ ಅಡವೇಶ ॥೨೦೯॥

ಕರವಿರಿಸುತಿರುವಾಗ ಕರಸುಚಿತ್ತವವಿರಿಸೆ ।
ಹರಿದು ಹಗುರಾದ ನಿರಿಯ ತ್ರಾಟಕ ಭೋಗ ।
ದ್ಧಿರಿಮೆಯನುಭವಿಸು ಅಡವೇಶ ॥೨೧೦॥

ಕುಡಿಕಿರಣ ಸುಳಿದಾಗ ಹಡಬಡಿಸಿವೇಳದಿರು ।
ಒಡಬಡಿಸಿದ್ದೋಷ ಮಾಡದಿರು ಸಿಂಪಿಯೊಳ್ ।
ಒಡಗೂಡುತನಕ್ಕ ಆಡವೇಶ

ಒಡಲು ವೇದನೆ ಹೆಪ್ಪು ಕೆಡೆಗೊಗೆವರಾರಯ್ಯ ।
ಘುಡಿ ಘುಡಿಸುತೆ ಕಿಡಿ ಕಡಲಗರ್ಭದಿ ಸಿಡಿತ ।
ಗಡಬಿಡಿಯುವಿಲ್ಲ ಆಡವೇಶ

ಕಪ್ಪು ಕಲೆಶಿಲೆಯೊಳಗೆ ದಿಪ್ಪಾದ ವಿಭೂತಿ ।
ಕಪ್ಪುನಯನದೊಳು ಪ್ರಭೆ ಚಿದ್ರುಕಂಡುಬದಿ ।
ಬೆಪ್ಪನಾಗದಿರು ಆಡವೇಶ

ಆನಂದದಿಂದೆಲ್ಲದಾನಂದ ಜಗವೆಲ್ಲ ।
ದಾನಂದದಿರವು ದಾನಂದದೊಳು ಪಯಣ ।
ಕೊನೆಗೆ ನಂಬಿದನು ಆಡವೇಶ

ಹಿಡಿದು ಕುಡಿಯುತಬಿಡುವು ತೊಡಗಿಹುದಲೌಕಿಕರು ।
ಹಿಡಿದು ಬಿಡದಿರದೆ ಕುಡಿಯುತಿಹ ನೋವಿರದೆ ।
ಕಡೆತನಕ ಪ್ರಜ್ಞ ಆಡವೇಶ

ಕುಡಿತೊಂದು ನೋಟೊಂದು ಹಿಡಿತೊಂದು ಮಿಡಿತೊಂದು ।
ಕಡೆಗೊಂದು ಸೊಡರುವೆರಡೆಂದುವೆನದಿರದ ।
ತೊಡಕೊಂದು ಬಂಧ ಆಡವೇಶ

ಸರನೆ ವಧು ಬರದಾಗ ಹಿರಿಯರಿಗೆ ತಿಳಿಸುತಿಹ ।
ತರುಣಂತೆ ತೀವ್ರ ದರಿಸು ಗುರುಹಿರಿಯನಿಗೆ ।
ಕರಹಿಡಿಸುವೆಂದು ಆಡವೇಶ

ಜ್ಞಾನ ಶಕ್ತಿಯು ಗುರುತು ಜ್ಞಾನಿ ಗುರುವರ ಬಲ್ಲ ।
ಮನನೀಯ ಮಾನ್ಯ ಮಾನಿನಿಯುಳವಳಿರಲು ।
ಮನ್ನಿಸಿನ್ನಿದನು ಆಡವೇಶ

ಕುಲ ಕೇಳಬೇಡವಳ ಕುಲ ನಿನ್ನದಾವುದಿದೆ ।
ಮಲಮೂತ್ರ ರಕ್ತ ಮಾಂಸತ್ವಕ್‌ದೆಲುವುಗಳೆ ।
ಕುಲ ನಿನಗೆಯಲ್ಪೆ ಅಡವೇಶ ||೨೯||

ಒಲಿದು ಕೂಡಿಸಲವನು ಫಲದೊಸರು ಕೊನೆಯಿಲ್ಲ ।
ಹಲವು ದಿಶೆಯಳಿದ ಹೊಲಸಳಿದ ಕಲೆವಿರಲು ।
ಒಲೆ ಹರಿದು ಬಾರೊ ಅಡವೇಶ ||೩೦||

ಹೆದರಿಬಂದಿರಲೆದುರು ಸುದತಿ ಹೃದಯೋಂದುಂಟು ।
ಪದಪಿಡಿದು ಬೇಡು ವಿದುವೊಂದೆಯಾಶ್ರಯವು ।
ಬೆದರು ಜಗದೊಳಗೆ ಅಡವೇಶ ||೩೧||

ಸೆರಗಿನೊಳು ಅಧಿಕಾರ ಯಾರಿಗೆಂಬುದನರಿತು ।
ಪರಿಯಗುಣವಿಡಿದು ಗುಣಿಯಾಗಿ ಸೇರಯ್ಯ ।
ನೇರಹೃದಯಿಡಿದು ಅಡವೇಶ ||೩೨||

ಹೆಪ್ಪು ಹಾಲಿಗೆ ಹಾಕು ತುಪ್ಪಕ್ಕೆ ಹಾಕುವದೆ ।
ತಪ್ತಾಯಕುಂಭ ಕ್ಷೀರದಡಿ ಹನಿಯೊಪ್ಪು ।
ಹೆಪ್ಪಾಗಿ ಸೇರು ಅಡವೇಶ ||೩೩||

ಸುರರು ಮುಡಿದುದನಳಿದ ಗರಳವನು ಧರಿಸಿದನು ।
ದುರುಳರಿಗೆ ನೆಲುಕದಿಹ ಸಬಲೆ ಮುಡಿಯಲಪ ।
ಹರಣ ಭಯವಿಲ್ಲ ಅಡವೇಶ ||೩೪||

ಘನಸಮಾಧಿಯ ಗರ್ಭದಣುಧೂಳಿ ತೃಷಯಿದೆಯೊ ।
ನೀನು ಶಶಿಯಾಗಿ ಕಿರಣವಿಡೆಯರಳಿ ರಜ ।
ಕಣದಿರಸದಾಳಿ ಅಡವೇಶ ||೩೫||

ಎಲೆದೆಲೆಯ ಮರೆಯೊಳಿರೆ ಕಲೆಯಫಲ ಹುಡುಕಪ್ಪ ।
ಸೆಲೆದೊರೆತ ಮೇಲೆ ಛಲಗಾರವೆಂದರೂ ।
ಕಲೆಕಂಡು ನೆಲೆಸು ಅಡವೇಶ ||೩೬||

ರಸನೇತ್ರ ಸುಧೆಸೂತ್ರ ರಸಿಕಹೃದಯುದ ಮೈತ್ರಿ ।
ಹೊಸದೊಸತು ಚೈತ್ರ ವಿರಹಿ ತಿಳಿಗುಣಗಾತ್ರ ।
ಹಸಿರಿನೋಳ್ ಬೆಳಗು ಅಡವೇಶ ||[illegible]

ರಸಸುಖದ ಸ್ಮರಣೆಯೊಳು ಹೊಸೆಯುತಿಹ ಕ್ರಿಯೆಯೇನು ।
ರಸನಿಧಿಧ್ಯಾಸ ಮುಂತಾದ ಕ್ರಿಯೆಗಳೇ ।
ವಾಸವಾಗುವವು ಅಡವೇಶ ||[illegible]

ಪಡೆಯ ಬೇಕೆಂಬುದನು ಪಡೆದು ಪಡೆ ವಿಶ್ರಾಂತಿ ।
ಗುಡುಗಡಗಿದಂತೆ ಶುಕಮುನಿಗಳಂತೆ ಕಡು ।
ದೊಡಲಾಗ್ನಿಯಂತೆ ಅಡವೇಶ ||[illegible]

ಸುಳಿಯುತಿಹ ಸೂಸುನಗೆ ಸುಳಿದೆಲೆಯ ಮಧುರಂತೆ ।
ಸಲೆಸಜ್ಜದೆಲೆಯ ಚಿಗುರೆಲೆಯ ಹೊಂದಿರುವ ।
ಮರಳಿ ಬರನವನು ಅಡವೇಶ ||[illegible]

ಶಾಂತಿದಯೆವೆಂಬಧರದಾಂತರಿತ ಮತಿವಿರತಿ ।
ಕಾಂತಿ ಚಕ್ಷುಗಳ ಸಂಧಿಯಿಂ ಚುಂಬನಕೆ ।
ಯಂತಪ್ಪ ಬೇಕು ಅಡವೇಶ ||[illegible]

ಆತ್ಮವೇಶಯನಮನೆ ಚಿಚ್ಛಕ್ತಿನಲ್ಲನೊಳು ।
ಶ್ರುತಿಯುಕ್ತಿ ಮನನ ಘರ್ಷಣಾನಂದದೊಳು ।
ಸತತೋಘ ಸ್ವೇದ ಅಡವೇಶ ||[illegible]

ಋತಜತೆಯದಾನಂದ ಸತತ ಜಲದೊಳು ಸ್ನಾನ ।
ಸತ್ಪ್ರಯತಿಚರ್ಯ ಶ್ರಮವಿರದ ತೃಪ್ತಿಯಳ ।
ದಾಸೋಹಿಯಾಗು ಅಡವೇಶ ||[illegible]

ಉತ್ತರತೆ ದಕ್ಷಿಣತೆ ಪತನಂಜಿಕೆನಿತಿಲ್ಲ ।
ತನ್ಮಯೋನಿಯೊಳು ಲೀನವಿರು ಕಾರಣದಿ ।
ತೀರ್ಥಪತಿಯಾಗು ಅಡವೇಶ ||[illegible]

ಅತಿವಾದದಪಮಾನ ವಿತ್ತ್ಯಾದಿರಹಿತಾದ ।
ಜೊತೆ ಕೆಡಕು ದೂರ ಚಿತ್ರ್ರಯತಿ ಚರಿತಾರ್ಥ ।
ಮತಿಧರಿಸಲೇಳು ಆಡವೇಶ ।।೩೩೫।।

ಭಯಗೊಳ್ಳದಿರುವಿದಕೆ ನಾಯಕಗೆ ಭಯವಿಲ್ಲ ।
ಬಾಯಮಾತಿಂಗೆಯಂಜದೆಯೆವೆದ್ದೇಳು ।
ನಾಯಕಿಯ ಗುಡಿಗೆ ಅಡವೇಶ ।।೩೩೬।।

ಶುದ್ಧವೆಂಬುವ ಚನ್ನೆ ಸಿದ್ಧವಿರೆ ಮಹಸಿದ್ಧಿ ।
ಸಿದ್ಧಪಯ ಕೊಡುವದಾಕಳಿರೆ ಮಹಿಷಿಯಡೆ ।
ಗುದ್ದಾಟವೇಕೆ ಅಡವೇಶ ।।೩೩೭।।

ಆತ್ಮರತಿ ಬೆದೆಯಳಿದು ಮಾತುಗಳ ಬಳಸೇಕೆ ।
ಪ್ರತಿಸವತಿಯಡಿಯ ವಾದಳಿದ ಸಂಮತಿಗೆ ।
ಜಾತಿಯಾವದದು ಅಡವೇಶ ।।೩೩೮।।

ಪ್ರಿಯತಮೆಯುಗೂಢೆಂದು ಪ್ರಾಯಕಳೆಯದು ಟೆಂಗು ।
ಕಾಯಿಯೊಳಗಿರುವ ಮೂರು ನಯನೊಂದದೊಳು ।
ಹಾಯ್ದು ಕುಡಿ ನೀರು ಅಡವೇಶ ।।೩೩೯।।

ಮಿಂದುತೋಕಳಿಯಾಡು ನಂದಿನಿಯು ನಿರ್ಭಯಳು ।
ಮಿಂದ ಮಂದಾಕ್ಷಿ ಮುಗುಳರಳಿದಾ ಮುದ್ರೆ ।
ಮುಂದು ನಿನಗೈತಿ ಅಡವೇಶ ।।೩೪೦।।

ಚನ್ನೆಪ್ರಾಪ್ತಿಯಬಳಿಕ ಚನ್ನೆಯಳ ಬಿಡೆಯಿಲ್ಲ ।
ಚನ್ನಾದ ತಿಳಿವು ನಿನಗಾಗಯತಿಯಾತ್ಮ ।
ಚನ್ನಪ್ರಿಯನೆಂದು ಅಡವೇಶ ।।೩೪೧।।

ಪೂರ್ಣತೃಪ್ತಿಯೊಳಿರಲು ಪೂರ್ಣವಳೆ ತೋರುವಳು ।
ಪರ್ಣದಶ್ವತ್ಥ ಕಂಪನತೆವೆನಿತಿರದ ।
ಪೂರ್ಣೆಯಳ ಕಾಣು ಅಡವೇಶ ।।೩೪೨।।

ನಿಂದೆಗಂಜದಿರು ಶಿವದಂದಕಾರ್ಯಕ್ಕೆ ಜನ ।
ನಿಂದೆ ಮಾಡುವರು ಏದನೊಪ್ಪದಿರೆ ದಣಿವು ।
ವೆಂದೆಂದು ಬಿಡದು ಅಡವೇಶ ॥[illegible]

ಚಿಂತನೆಯುನಳಿಯೊ ವರಚಿಂತೆ ವಿಡಿಯುತ ಮುಂತೆ ।
ಕಾಂತೆ ತಲೆದೂಗುವಂತೆ ಸುಖದೊಳಾಡು ।
ಸಂತೆವಿದುವಲ್ಲ ಅಡವೇಶ ॥[illegible]

ಕುಸುಮಮೇಲಿಹುದಯ್ಯ ರಸಭರಿತದ್ರಾಕ್ಷಾಲಕ್ಕಿ ।
ಕೆಸರೊಳಗೆ ಏಹುದು ಸಮನಂದದೊಳಹೊರಗು ।
ಭಸಿತಾಂಗ ಮುಂದು ಅಡವೇಶ ॥[illegible]

ತತ್ಪದವೆ ಶಕ್ತಿ ರಸಜೊತೆಜೀವಿ ತ್ವಂಪದವು ।
ಜೊತೆಗೂಡಲಾಗದಸಿಪೂರ್ಣದೇಕತ್ವ ।
ತತಿಗೆ ಬಾ ಬೇಗ ಅಡವೇಶ ॥[illegible]

ಇರುವದೊಂದ್ ಒಳಸೂತ್ರ ಹೊರಸೂತ್ರ ಹಲವಾರು ।
ಮರೆತು ಜಡವಾದ ಶಿವಶಕ್ತಿಯೋಗದಾ ।
ಸೂತ್ರ ಸನಿಹಾಗು ಅಡವೇಶ ॥[illegible]

ಚನ್ನೆಯಳ ಚಿಂತನೆಯೆ ಚನ್ನವಹ ಪನ್ನೀರು ।
ಚನ್ನಗಹುದುಂಟು ಆಹ! ಸಂಪನ್ನೆ ಸುಪ್ರ ।
ಸನ್ನೆ ರಸರನ್ನೆ ಅಡವೇಶ ॥[illegible]

ಬೆಸುಗೆಯಿಂ ಬೆಳಗುವದು ಬೆಸಗೊಳಲು ತಿಳಿಯುವದು ।
ಭೂಕ್ಷಿರಹಿತಾದ ಕಾಂತೆಜೊತೆಗಾತಿ ಜತಿ ।
ಬೇಸುನಿನಗಿಲ್ಲ ಅಡವೇಶ ॥[illegible]

ಕಾಮಿಗೆಲ್ಲಿಡೆ ಸ್ನೇಹಿ ಕಾಮಿನಿಯೆ ತೋರ್ಪ್ವಂತೆ ।
ಸಮನಾಗು ಕಾಮಭಾವನೆಯು ನಳಿದಿಹುದ ।
ನಮನೀಯ ಸೋಮ ಅಡವೇಶ ॥[illegible]

ಪರಸತಿಯೊಳುದಿತ ಸುತ ಪರರಿಂಗೆ ವೆನಿಸುವಂತೆ ।
ಹೊರನಿನ್ನ ದೃಷ್ಟಿ ಹೊರಗುಳಿದು ಮರಣಾಂತ್ಯ ।
ದೊರಕೊಳ್ಳುವದೇನು ಅಡವೇಶ ||೨೫೦||

ಮೂಡಿ ಬರುತಿರಲಲರು ದೂಡಿದರು ಬಿಡದಯ್ಯ ।
ಮೂಡುತಿಹ ರವಿಯು ದೂಡಿದರೆ ಮರಳುವನೆ ।
ನೋಡಿ ಕುಡಿಪಿಡಿಯೊ ಅಡವೇಶ ||೨೫೧||

ಇರದು ಅಘು ತಿಂದವಗೆ ಹೊರಗಿನಾ ಲಕ್ಷ್ಯವದು ।
ಧರಿಸು ಲಕ್ಷಾರ್ಥಹೃದಯು ಹೃದಯೊಂದು ರಸ ।
ಮರವೆಯಳಿಯುತಲಿ ಅಡವೇಶ ||೨೫೨||

ಶೃಂಗಾರದಾಭರಣ ಹಿಂಗ್ಯಾಕೊವೆನ್ನದ ನೀ ।
ರಂಗ ಶೃಂಗಾರಿ ಕರೆಯುಂಟು ದಂಗಳದ ।
ಸಂಗ ಸಂಭಾವ್ಯ ಅಡವೇಶ ||೨೫೩||

ಹಣಿಗೆ ಹತ್ತಿದ ಹೊಲಸು ಹಣಿಗೆ ಕಾಣುವದೇನೊ ।
ಮನ ಮೂರ್ತಿ ಬರಲೆದುರು ಘನೀಭೂತ ಹನಿ ।
ಹನಿಯಾಗಿ ಹರಿವು ಅಡವೇಶ ||೨೫೪||

ಆದರಾತಿಥ್ಯಮಧು ಮಧು ಚಂದ್ರುಚಿರವಲ್ಲ ।
ಹಾದರಿದುವೇನು ಹಾದರೆನ್ನುವ ಜೀವಿ ।
ಯಾದಾಯ ಬಿಡನು ಅಡವೇಶ ||೨೫೫||

ಹಾದಿಹಿಡಿದವಗಿದುವು ಹಾದರೆನಿಸುವದಯ್ಯ ।
ಹಾದಿ ಬೇರ್ಪೇರೆ ಕಾಣುವದು ಕಾಣದಿಹ ।
ಹಾದಿ ಹೆಗುರಲ್ಲ ಅಡವೇಶ ||೨೫೬||

ತರತರದ ವಿರಹವಿರು ಪರರಿರವರೊಳು ಕಾಣು ।
ಸರಿದಂತರಾತ್ಮದೊಳಹುಡುಕು ಪಾತ್ರಪದ ।
ಪುರುಷಾಗು ಹರುಷ ಅಡವೇಶ ||೨೫೭||

ಧರಿಸಿಕಳು ಪಂಚಶರ ಗುರಿವಿಡಲು ಭ್ರಾಂತಿಹರ ।
ತಿರುಗದಿರು ಭಯದಿ ಸತ್ತಾದಿ–ನಿಜಸುಖದ ।
ನಿರಿಯು ನಿರ್ಭಯವು ಆಡವೇಶ ॥

ಪುರುಷ ಪುರುಷರೊಳಗೆ ಸರಸವೆಂತಹುದಯ್ಯ ।
ವಿರಲೆನುವ ಮೂರ್ಖ ಸಾಗು ನೀನೊಂದಾಗಿ ।
ವಿರುವ ಪ್ರತಿರೂಪ ಆಡವೇಶ ॥

ಇನಿಯನುಣ್ಣುವದನ್ನು ದಿನಿಯುಳಿದುರಿನೋಳಿರ್ದು ।
ಮನವಿಟ್ಟು ನೋಡುವಂತೆ ನೋಡುತಿಹಳೈ ।
ನೀನುಣ್ಣುದೆಲ್ಲ ಆಡವೇಶ ॥

ಬರಿದ ತೊಟ್ಟಿಲವಿಡಿದು ಸ್ವರವಿಡಿದ ಜೋಗುಳವು ।
ಸರಿಯೆನ್ನರಾರುದನುಭವಾಮೃತವಿರದೆ ।
ಗುರುವೆನ್ನರಾರು ಆಡವೇಶ ॥

ನೀರುಬಳಿ ನೀರಡಿಸಿ ಬರಬೇಕು ಹೊರತಾಗಿ ।
ಬರಲು ಜಲರುಚಿಯ ಬೆಲೆಯೇನು ಬೆಲೆಯರಿವ ।
ಪರಿಯೇನು ಸಖನೆ ಆಡವೇಶ ॥

ಕರೆದು ತೋರಿಸರಯ್ಯ ನಾರಿಮಣಿ ಸರಸವನು ।
ತೊರೆದು ಚಂಚಲತೆ ಧರಿಸುಚಿರ ಮಾಲೆಯನು ।
ವಿರಹಕೃಪೆಯೊಗ ಆಡವೇಶ ॥

ಮರೆತು ಮರುಳಾಗದಿರು ಕರೆದು ಮರೆಯಾಗದಿರು ।
ಮರೆಯ ಮಾದಕತೆ ಕಳಕೊಳ್ಳದಿರು ಬಿಂದು ।
ಧರಿಸಿ ತೊರೆಯದಿರು ಆಡವೇಶ ॥

ವ್ಯಭಿಚಾರಿ ನೀಂ ಅವ್ಯಭಿಚಾರಿಯುವಳಿರಲು ।
ಸೊಬಗು ನಿಮ್ಮೊಳಗೆ ವೆಂತಯ್ಯ ಗುರುವೆನಲು ।
ಅಭಯವನು ನೀಡು ಆಡವೇಶ ॥

ಬರುವವಳ ಬಗ್ಗೆ ಗಾಬರಿಯಾಗದಿರು ಜೀಯ ।
ಕರಣಿರದ ಮೆರಗು ಸ್ಮರಣದಿಂ ರಮಿಸುವಳು ।
ದಾರಿ ಕಾಯುತಿರು ಅಡವೇಶ ॥೨೭೭॥

ಮೂರು ಕಾಲದಿ ರೂಪು ಕರಚಂದ ಸುಚಿತ್ತಚಿರ ।
ಚಾರು ಮತಿಗೆಜ್ಜೆ ಧರಿಸಿದಾ ಸುಂದರಿರೆ ।
ವರನಾಗಿಯರಳು ಅಡವೇಶ ॥೨೭೮॥

ತನ್ನೊಳಗೆ ರಸಲಿಪ್ತರಸದನ್ನೆ ನಯನರಳಿಸುದ ।
ಕಿನ್ನರವಿಯಾಗಿ ಸಿದ್ಧನಿರು ಮುಂದಿತಿ ।
ಚನ್ನಯಡಿ ಸಮಯ ಅಡವೇಶ ॥೨೭೯॥

ತುಂಗ ಹೃದಯದ ವ್ಯಂಗ ರಂಗದೊಳು ವಿರಲವಗೆ ।
ದಂಗಳವುವೇಕೆ ಪದರಳಿಯುಲೊಳಗೊಂದು ।
ಹಂಗಳಿದ ಮೇಲೆ ಅಡವೇಶ ॥೨೮೦॥

ಗಂಧಿನಿಯು ಸಾಕೆಂದು ಹಿಂದೆ ಸರಿಯದು ಮರೆತು ।
ಹೊಂದುತಿರೆ ಲಕ್ಷ್ಯ ಬಂಧನದು ಬಂಧನದೆ ।
ಚಂದಾಗಿ ತಿಳಿಯೋ ಅಡವೇಶ ॥೨೮೧॥

ಹೊರಟ ಸಿದ್ಧನು ಮರಳಿ ಚಾರುಸತಿ ರಾಹುಲನ ।
ಚಾರುಮುಖ ನೋಡಿದಂತೆ ಸುಖಸಹಜಾಂಗ ।
ಬೇಡವೆನೆ ಬಿಡದು ಅಡವೇಶ ॥೨೮೨॥

ಇಚ್ಛೆ-ಕ್ರಿಯೆ ರತಿಯುಳಿದು ಸ್ವಚ್ಛಶಕ್ತಿಯಳಂಗ ।
ದ್ವಿಚ್ಛಿಕೋ ರಂಗ ಕಾರಣಿದಕೇನು ಪರ ।
ಮೋಚ್ಚಳಾಗಿರಲು ಅಡವೇಶ ॥೨೮೩॥

ಲಜ್ಜೆಯುಳಿದಿಹ ಹಸಿವು ಮಜ್ಜಿಗೆಯು ಕಳೆಯುವದೆ ।
ಗೆಜ್ಜೆಗಳನಾದ ಮಧುಚಂದ್ರನಳಿಸುವದೆ ।
ಸಜ್ಜು ನೀನಾಗು ಅಡವೇಶ ॥೨೮೪॥

ಗಗನ ಸುರಭಿಯ ಸೆಜ್ಜೆಯಗಲದಿಹಯೋಗಕ್ಕೆ ।
ಸೊಗ ಸೇವ್ಯ ಸಾಮ್ಯ ಪುರುಷ ಸುಭಗೆಯ ಯೋಗ ।
ಸುಗ್ಗಿಯು ಸುಚಿತ್ತ ಆಡವೇಶ ॥

ಕೆಚ್ಚಲವು ಕೆಂಪು ಕುಚಚುಚುಕು ಕಪ್ಪಿರಲೆರಡು ।
ತ್ರಪೆಯಿಂದ ತೋರ್ಕು ಮರೆಯಪಯ ಹೊರಧಾರಿ !
ರುಚಿಗಳೆರಡೊಂದೆ ಆಡವೇಶ ॥

ಸುರರಸುರಮುನಿಗಳೊಳು ಸರಸವ್ಯಭಿಚಾರತೆಯು ।
ಚರಿತವಿಹುದತ್ತವಿರುಭಾವ ವಿರಹಿತದ ।
ಸರಸವಿಹುದಿತ್ತ ಆಡವೇಶ ॥

ಕರಣೇಂದ್ರಿಸತಿವಿರಲು ವರಣವೇಕೆನುವಿಯಾ ।
ಮರಳದದ ಹರೆಯುಯಿವಳೊಳಿರೆಯುವಳು ಚಿರ ।
ಹರೆಯ ಚೇತನಳು ಆಡವೇಶ ॥

ವರಿಸೊ ಇವಳನು ಯಾರು ಹರಣವಾರುವೆಂತು ।
ಹರಣ ಯತ್ನದಿರೆ ಕಾಣಿಸಳು ಚಿಂತಿಸ ।
ದಿರು ಸತ್ಯವೆಂದು ಆಡವೇಶ ॥

ರೂಪು ಕಂಡಾದರೂ ತಾಪ ಕಳಕೊಳ್ಳರೆನೆ ।
ಪಾಪಿಗೆ ನಿರೂಪುವೆಂತಳವು ಧೈರ್ಯದಿರು ।
ಸ್ವಪ್ನ ಸಖಿಯತ್ತ ಆಡವೇಶ ॥

ಮಿಥ್ಯೆದೆಡೆ ಮೋಹಗತಿ ಮಿಥ್ಯೆ ಸತ್ಯೆನು ಭ್ರಾಂತಿ ।
ರತ್ಯಾರ್ಥ ಕ್ಷಣಿಕ ಹೊಂದಿದವ ಹೊಂದುವನು ॥
ಸತ್ತು ಹುಟ್ಟುದನು ಆಡವೇಶ ॥

ಅಳುಕದಿರುವಂಜದಿರು ಕಳೆಗುಂದುತ ವಿಚಾರ ।
ದೊಳು ಸಿಲುಕದಿರು ಋಣವಳಿದು ಋಣಿಯಾಗು ।
ಚಲ್ಲಿ ಚಲುವೆಯಡಿ ಆಡವೇಶ ॥

ಗುಣದುಪಾಧಿಯ ಕಾರ್ಯ ಗುಣವನಳಿದವಗೇನು ।
ಗುಣಗಳಳಿದಿರುವ ನಿರ್ಗುಣಿಗೆ ನಿಯಮಗಳ ।
ಹೆಣೆದು ಫಲವೇನು ಅಡವೇಶ ॥೩೮೩॥

ಇಂದ್ರಿಯಾತೀತ ರತಿ ಸಂಧಿಸಲು ಬಾಹ್ಯರತಿ ।
ಸುಂದರಿಯಕೋಪ ಸಾಮಾನ್ಯವದು ಸವತಿ ।
ಹೊಂದಿದವಗುಂಟು ಅಡವೇಶ ॥೩೮೪॥

ಕಾರಣದಿ ಸುಜ್ಞಾನಿ ಚರಣದಡಿ ಪಾದವಿಡು ।
ಹರಿದು ಮರ್ಯಾದೆಯನು ಪ್ರತಿಜ್ಞೆಯ ಮಾಡಿ ।
ಮೀರು ಸೀಮೆಯನು ಅಡವೇಶ ॥೩೮೫॥

ಸುಜ್ಞಾನಿ ಪ್ರಿಯಕರನರಜ್ಞರರು ಕಂಡರೂ ।
ಪ್ರಜ್ಞಾತೀರ್ಥದಲಿ ಮಿಂದಂತೆ ಫಲವಹುದು ।
ಸುಜ್ಞಾನಿವರಿಸು ಅಡವೇಶ ॥೩೮೬॥

ಸಂದನೀನಾಗಲಾ ನಂದಿನಿಯು ಸಹ ನಿಮ್ಮ ।
ನಿಂದಿಸಲು ಪಾಪ ವಂದಿಸಲು ಚಿದ್ರೂಪ ।
ಹೊಂದುವರು ಸತ್ಯ ಅಡವೇಶ ॥೩೮೭॥

ನೂರಾರು ಜನರಿರಲು ಬೆರೆಯುದನು ಮರೆಯದಿರು ।
ವರನು ಮಂಟಪದಿ ವಧುವಿನೆಡೆ ನೋಟವನು ।
ಹರಿಸುತಿರೆ ಹರ್ಷ ಅಡವೇಶ ॥೩೮೮॥

ಅಚ್ಚೊತ್ತುದೊಮ್ಮೆ ನಿಜಸಚ್ಚಿದಾನಂದಾಗು ।
ಹಚ್ಚಿಬಟ್ಟೆವನು ಸರಿಯಾಗಿ ಚುಚ್ಚಿರಲು ।
ಚುಚ್ಚದದು ಮತ್ತೆ ಅಡವೇಶ ॥೩೮೯॥

ಮಹರಮ್ಯ ರತಿಯಿಂದ ಬಹುಜನನ ಭಯವಿಲ್ಲ ।
ವಿಹನೋರ್ವ ಸಚ್ಚಿದಾನಂದ ಸಂತಾನ ।
ಮೋಹವನು ಸಹಿಸು ಅಡವೇಶ ॥೩೯೦॥

ಇರುಳಿರದ ಪ್ರಕಾಶದೊಳಿರ್ವರುಚಿಯುತ್ಸಾಹ ।
ನೊರೆಯೊಳಗೆ ನಂದವಿರೆ ಹಾಲುರಹಿತನನು ।
ಪರಿಪೂರ್ಣ ತೃಪ್ತ ಅಡವೇಶ ॥[illegible]

ನುಡಿದ ನುಡಿಗಳ ನಂಬಿ ಮುಡಿಯೊ ನಿರ್ಮಲಸಖನೆ ॥
ತಡೆತಿದೆದು ಸೊಂಪು ಕುಡಿಯೊದವಸರವಿಡದು ।
ಕಡೆಯ ಫಳವಿಂದು ಅಡವೇಶ ॥[illegible]

ಗುರುಸಾಕ್ಷಿ ಶಪಥದಿಂ ಸರಸದಿಂ ತಪ್ಪಿದರೆ ।
ಪರಿಪೂರ್ಣಯತ್ರ ನೀನಿತ್ತ ಮಾತ್ರ ಕೊಲೆ ।
ಗಾರನಾಗುವಿ ಅಡವೇಶ ॥[illegible]

ಆಹ್ಲಾದ ನಿನಕಂಡು ನಲಿಯುವದು ಯಾವಾಗ ।
ಲೀಲೆಸುವಿಲಾಸದಿಂ ರಂಗ ಕಳೆಯಿಂದ ।
ಸುಳಿದು ಬಾ ಬೇಗ ಅಡವೇಶ ॥[illegible]

ಶೀಲೆವೆಂಥವಳೆಂದು ಕೇಳು ಪುರ್ವದಿ ಮುನ್ನ ।
ಹೇಳಲ್ವೆ ಮುಖವು ಸತಿ ಸುಖದ ಸಖಿಕಂಡು ।
ಗೆಳತಿ ಹಸನ್ಮುಖಿಯು ಅಡವೇಶ ॥[illegible]

ನೀನವಳೊಳಗೆಯವಳು ನಿನ್ನೊಳಗೆ ನೀವಿರ್ವ ।
ರಿನ್ನು ಯಾರೊಳಗೆ ಹೇಳುದಕೆ ಹಾಯಾಗಿ ।
ಬನ್ನಿ ಕಲೆಯೊಳಗೆ ಅಡವೇಶ ॥[illegible]

ಗೆಳತಿ ಹೇಳಿದಂತೆ ಗೆಳತಿ ಕಳುಹಿಸುವಾಗ ।
ಬಾಲ್ಯಸಖಿಯೆನ್ನ–ಸಲುಗೆಯೊಳು ಮರೆಯದೆನೆ ।
ಗೆಳತಿಗತಿ ನಗುತ ಅಡವೇಶ ॥[illegible]

ಉರಗ ಭೂಷಣ ಪ್ರೀಯ ಗುರುವು ಗುರುಪಾದಯ್ಯ ।
ಕಾರಣ ಪುರುಷನು ಕೃಪೆ ಮಾಡಲೆಲ್ಲರಿಗೆ ।
ಕಾರಿರುಳಿನೊಳಗೆ ಅಡವೇಶ ॥[illegible]

## ವಿಮರ್ಶೆ–ವಿಮರ್ಶಕ

ವ್ಯಕ್ತಿಪರ ವಿಮರ್ಶೆಯು ತಕ್ಕುದೆನ್ನಲುಬೇಡ ।
ವ್ಯಕ್ತವಿಷಯಾಂಗದಾಧಾರ ಪರವಿರಲಿ ।
ಚೊಕ್ಕವಾಗಿರಲಿ ಅಡವೇಶ ॥೯೯॥

ವಿವೋಚಿತ ವಿಷಯದಲಿ ವಿಮರ್ಶೆ ವಿಲಾಸವದು ।
ರಮತೆಯಾದರ್ಶದುದಯಿಸುತೆ ಬೆಳಗಿಸುತೆ ।
ಕುಮತಿ ಕುಲಕೋಟಿ ಅಡವೇಶ ॥೧೦೦॥

ಹುಳಿ ಹುಣಚಿಲಿಂಬುರಸ ಹೊಲಸು ಕಳೆಯುವದಯ್ಯ ।
ಝಳ ಝಳನೆ ಹೊಳೆದು ಕನ್ನಡಿಯ ಪ್ರತಿಬಿಂಬ ।
ತಿಳಿವಿದರ ಕಾರ್ಯ ಅಡವೇಶ ॥೧೦೧॥

ಮುಖಕಂಡು ನುಡಿಯದಿರು ಸಖನ ಸತ್ಕರಿಸುತಿರು ।
ಮುಖವಾಡ ಧರಿಸಿ ಮರುಳಕೃತಿವಿರಲೊರ್ವೆ ।
ಅಖಿಲವದು ನಾಶ ಅಡವೇಶ ॥೧೦೨॥

ಸುಳಿಯುವನು ಸುಳಿಯೊಳಗೆ ಸುಳಿಯುತಿಹ ಕಂಬೆಚ್ಚಿ ।
ನೊಳಗೊಯ್ಯು ತೆಳೆವ ಚಿನ್ನ ನಿಷ್ಕರ್ಷಿ ಚಿನಿ ।
ವಾಲ ವಿಮರ್ಶಕನು ಅಡವೇಶ ॥೧೦೩॥

## ಪುರಸ್ಕಾರ

ಪುರಸ್ಕಾರ ಕೊಡುಗೆಯು ವರದ ಕೃತಿ ಕಲೆಗುಂಟು ।
ಮರೆತು ಜಾತಿತ್ವ ಜಾತಿಡಿದು ಕೊಡಲದರ ।
ರಿರವಹತ್ಯವದು ಅಡವೇಶ ॥೧೦೪॥

ಕಡತಂದ ಶಕ್ತಿಯಿಂ ಪಡೆದೆಯಾ ಬಹುಮಾನ ।
ಕೊಡಲಕ್ಕಿಯಡುತೆಯುಣಲೊಂದು ಜಾಣತನ ।
ತೊಡಗಿದವರೆಷ್ಟು ಅಡವೇಶ ॥೧೦೫॥

ವಶೀಲಿ ಪ್ರಶಸ್ತಿಗಳು ಯಶದಫಲವೆನಬೇಡ ।
ಹೊಸದರಿವೆ ಮುಚ್ಚಿರುವ ಹೇಸಿಕೆಯ ಪಾತ್ರೆ ।
ರಸಹೀನ ಮಾತ್ರೆ ಅಡವೇಶ ॥೩೦॥

ವರಕೃತಿಗೆ ಬೆಲೆಯಿಲ್ಲ ಬರಿದೆ ಕೃತಿಗುಂಟು ಬೆಲೆ ।
ಬರೆದವನ ಮರಣನಂತರದೀ ಘನಮಾನ್ಯ ।
ದೊರೆತು ಫಲವೇನು ಅಡವೇಶ ॥೩೧॥



# (೨)

## ಶ್ರೀ ಕರ

ನುಡಿ

ಹೆಚ್ಚುಳತೆ ನುಡಿಬೇಡ ಚುಚ್ಚು ಕೃತಿಯದು ಬೇಡ ।
ಮೆಚ್ಚುವವರಾರು ಸತ್ಪಾತ್ರಕಿಡದೆ ಧನ ।
ಮೆಚ್ಚಿನಾಂಚಲಕೆ ಆಡವೇಶ ॥೧॥

ಸಾಕಷ್ಟು ಗಳಿಸಿದೆನು ನಾಲ್ಕುವರುಷದೊಳಿಂತು ।
ಕಾಕುನುಡಿಗಳಿವು ಕುಕ್ರಮದಿ ಶಿರಕೊಯ್ದು ।
ನೂಕಿರುವ ಚಿತ್ರ ಆಡವೇಶ ॥೨॥

ಸಮತೆ ತತ್ವದಿಯನ್ಯ ರಮನಾರಿ ರತಿನೇಹ ।
ಸಮತೆನಲು ತನ್ನ ಸತಿಯನ್ಯ ಮಡಿಲೊಳಿರೆ ।
ಯಮಿತ ಕ್ರೋಧೇಕೆ ಆಡವೇಶ ॥೩॥

ಸ್ವಪ್ನನುಡಿ ಜಾಗ್ರದಲಿ ತಪ್ಪದಲೆ ನಡೆಸಿದನು ।
ಒಪ್ಪು ಹರಿಶ್ಚಂದ್ರ ಜಾಗ್ರದಲಿ ನುಡಿದು ಜನ ।
ತಪ್ಪಿಸುತಲಿಂದು ಆಡವೇಶ ॥೪॥

ಹುಚ್ಚನವ ಹುಚ್ಚನಿವ ಚುಚ್ಚುನುಡಿ ಸರಿಯಲ್ಲ ।
ಮೆಚ್ಚುಮನದಂತೆ ವಿಹುದು ಒಂದೊಂದು ತೆರ ।
ಹೆಜ್ಜೆ ಹಿಡಿದವಗೆ ಆಡವೇಶ ॥೫॥

ಕಂಡಿದುದು ಸರನುಡಿಯ ಗುಂಡುಗಳು ಪುಟೆಯಲ್ಕೆ ।
ಕೊಂಡಿ ಬಡಿದಂತೆ ನಿರ್ದೋಷಿ ನಿಜಗೆ ಶ್ರೀ ।
ಖಂಡ ರುಚಿಯಂತೆ ಆಡವೇಶ ॥೬॥

ಕಡಿವಾಣವಿರದ ನುಡಿ ಕಡೆಗೆ ಕೆಡಕಾಗುವದು ।
ಕಡೆಗೆ ಶಿಶುಪಾಲ ಶಾಮಂಗೆ ನುಡಿದುದೇ ।
ಕಡೆಗಾಯ್ತು ಶಿರವು ಅಡವೇಶ ॥೭

ನಡೆನುಡಿಯ ವಿರಲೆರಡು ಜಡೆಶಿರಕೆ ಶೋಭಾಯು ।
ಗಿಡದಿ ಫಲಗುಂಪು ಮಾತೆ ಮಡಿಲೊಳು ಕಂದ ।
ಬೆಡಗಿನಂತಿಹುದು ಅಡವೇಶ ॥೮

ಡಾಂಭಿಕ

ಸೋಗಕ್ಕೆ ಮೆಚ್ಚು ಶಿವಯೋಗಕ್ಕೆ ಮೆಚ್ಚರರು ।
ರಾಗಲಂಪಟರು ಸುರೆಗೆ ಸಿರಿ ಹರಿಸಿದರೆ ।
ನಾಗಧರನೊಲುಮೆ ? ಅಡವೇಶ ॥೯

ಹುಟ್ಟು ಬಣ್ಣ ಸ್ಥಿರವು ಕೊಟ್ಟ ಬಣ್ಣಳಿಯುವುದು ।
ಹುಟ್ಟು ನಡಿಗೆಯದ ವಾಜಿ ಬಿಡದದು ಓಟ ।
ಕೊಟ್ಟ ಸೋಗ್ಭಂಗ ಅಡವೇಶ ॥೧೦

ಕಾವಿಧರಿಸಿರೆ ಮಾನ್ಯ ದೇವನಾಗುವನೆನಲು ।
ತೀವಿಮಹಿಷಂಗೆ ತೊಡಿಸಲ್ಕೆ ನಂದಿಯ ।
ಭಾವಗುಣವುಂಟೆ ಅಡವೇಶ ॥೧೧

ದೂರ ಶಹರದಿ ಸಾಧು ಸರಿಸಿ ಕಾವಿಯ ವೇಷ ।
ಧರಿಸಿ ಬಿಳಿಬಟ್ಟೆ ರಸತೃಪ್ತಿ ನರ್ತನದ ।
ಕಿರುಗೆಜ್ಜೆ ಭಂಗ ಅಡವೇಶ ॥೧೨

ಹಣೆಯ ಭಸ್ಮವ ಕಂಡುದುಣಿಸಲ್ಕೆ ಕರೆಯುವಾ ।
ಗುಣಹೀನಕ್ಕಿಂತ ಕೃಪಣೋತ್ತಮನು ಪರಮ ।
ಗುಣಿಯು ಎನಬೇಕು ಅಡವೇಶ ॥೧೩

ಒಳನಗುವು ಮೇಲಳವು ನಲುಮೆ ನುಡಿ ಸಭೆಯೊಳಗೆ ।
ಕುಲಕಿಲರನರರ ಕಂಡೊಪ್ಪರಾ ನಿಜರು ।
ಸೂಳೆಸಮ ಪಾತ್ರ ಅಡವೇಶ ॥೧೪

ಶೀಲಪಾರ್ಥಿವ ಕಂಡು ಜಾಲರಾಡೊನದ ।
ಮೇಲಿರುವ ಸೋಗು ಗುರುವಪ್ಪನಿದಪಾತ್ರ ।
ಕಾಳು ಮರೆ ಬಲ್ಲ ಅಡವೇಶ ॥೧೫॥

## ಸುಪಥ-ಕುಪಥ

ಅಪ್ಪನಾ ಹೆಸರೇಳಿ ತಿಪ್ಪೆಯೊಳು ಶಯನಲ್ಲ ।
ಅಪ್ಪನಾ ಮಾರ್ಗ ತಪ್ಪಿರಲು ತಾನಳಿದು ।
ಒಪ್ಪು ಕೃತಿಯೆಡೆಗೆ ಅಡವೇಶ ॥೧೬॥
ಸ್ವಪ್ನದುಪದೇಶದಲಿ ಸುಪಥದಿಂ ಕಣ್ಣಪ್ಪ ।
ಸಫಲದಿಂ ಮುಕ್ತ ಜಾಗ್ರದುಪದೇಶವಿರೆ ।
ಕುಪಥ ಗಾಮಿಗಳು ಅಡವೇಶ ॥೧೭॥
ಗಿಡಕಾಯ್ದು ಫಲವುಣಲಿ ಗಿಡಕಡಿದರೇನಾಯ್ತು ।
ಬಿಡಗು ನವಜೀವಿ ಕುವಿಲಾಸ ಲಕ್ಷದಲಿ ।
ನುಡಿ ನಿಯಮ ತುಳಿದ ಅಡವೇಶ ॥೧೮॥
ಮತಿ ಪಥವ ಪಡೆಯಲ್ಕೆದತಿ ವಿಚಾರಿಂದೇನು ।
ಸತಿಯ ಕೂಟಕ್ಕೆ ಅನ್ಯರರ ಕೇಳುವನೆ ।
ಗತಿಯೊ ಚಿರಮಾರ್ಗ ಅಡವೇಶ ॥೧೯॥

## ಚಂಚಲ

ಬಡತನದ ಗತಿಯೊಳಗೆ ಬಿಡದೆ ನೆನೆಯುತ ಶಿವನ ।
ಕೊಡದ್ರವ್ಯ ಪ್ರಾಪ್ತಿ ನಂತರದಿ ಪ್ರತ್ಯಕ್ಷ।
ಕಡುವೇಶಿ ಭಾವಿ ಅಡವೇಶ ॥೨೦॥
ಮರಿಯಾದೆಯಳಿದವನು ಸಿರಿವಂತನಿರಲೇನು ।
ಮರೆತಾದರೊಮ್ಮೆ ಕನಸಿನೊಳು ಸಹನೇಹ ।
ವಿರಿಸಬಾರದದು ಅಡವೇಶ ॥೨೧॥
ಆಶೆರಹಿತರರ ಗುಣರಾಶಿಯೊಳು ನಾಕಾಣೆ ।
ದಾಸೆ ಬಂಧನದಿ ಬಂಧಿತರು ವಿವಿಧ ತೆರ ।
ಪಶು ಜೀವಿಗೇನು ಅಡವೇಶ ॥೨೨॥

ತುಡುಗು ಕೃತಿಯೆಲ್ಲದೊಳು ಬಿಡುವಿರದೆ ನಡೆದಿಹುದು।
ನಡೆದಪರಿ ವಿವಿಧ ಸ್ವಾರ್ಥ ರಹಿತರಲವಗೆ ।
ಕಿಡಿಯಂಜಿಕಿಲ್ಲ ಅಡವೇಶ ॥೬೩

ಅಪವಾದ

ಎಂತುವಿರೆ ಜಗದೊಳಗೆ ಬಂತು ನಿನಗಪವಾದ ।
ಶಾಂತಮಾನಸರು ಗಂಭೀರದಿಂಮೋಟ ।
ಸಾಂತ ಘನಮಾನ್ಯ ಅಡವೇಶ ॥೬೪

ಸಫಲಪಾರ್ಥನ ಪ್ರಿಯಗೆಯಪಕೀರ್ತಿ ಬಿಡಲಿಲ್ಲ ।
ಕುಪಿತ ವಿದಕೇಕೆ ರವಿಗೆಲ್ಲಿ ಮೋಡಭಯ ।
ದಪರಂಜಿ ಸತ್ಯ ಅಡವೇಶ ॥೬೫

ಅಪದೂರು ಬರಲವರು ಕುಪಿತರಾಗುವದಿಲ್ಲ ।
ದಪಮಾನದಿ ತಪವೃದ್ಧಿ ಸಮ್ಮಾನದಿಂ ।
ತಪಕ್ಷಯವು ನೀತಿ ಅಡವೇಶ ॥೬೬

ನಿಂದಕನೆ ಸುಹೃದಯಿಯೆಂದು ಚಿನ್ನುಡಿಯುಂಟು ।
ವೆಂದು ನಿಶ್ಚಯಿಸಿ ದಾಸೋಹಿ ಶರಣರರು ।
ಮುಂದಿಡುತಪದವ ಅಡವೇಶ ॥೬೭

ಸೀತೆಯುಟ್ಟದ ರಾಮು ಸತಿಯ ಮಾರಿದ ಸತ್ಯ– ।
ಮಾತುಗಳಿಗೊಂದು ಮಾತುಂಟು ಶಾಂತವಿರೆ ।
ಮಾತು ಬರದಿರದೆ ಅಡವೇಶ ॥೬೮

ವೇದ ಪುರುಷಗೆ ನಿಂದೆಯುದರಿಂದ ಬಾಧೇನು ।
ವಿದಿರಿಟ್ಟುವೆಲ್ಲನರಿತಿಹುದು ಕಾರಣದಿ ।
ಯದರಿಂದ ದೂರ ಅಡವೇಶ ॥೬೯

ವೈದ್ಯ–ಅನುಭವ

ನಾಡಿಗತಿಮತಿವಿರದ ನೋಡಿ ವೈದ್ಯರು ವಿಷವು ।
ರಾಡಿಕಲಿಸುವದ ವಿದನರಿಯದಾ ಕೆಲರು ।
ಹಾಡಿಹೊಗಳುವರು ಅಡವೇಶ ॥೭೦

ದುರಿತಾದ ಬಾಧೆಯುದದಗಣಿತಂ ರೋಗಿಗಳ ।
ಸಗಿಸ್ತಿರುಜೆ ಕಳೆವ ಮಿತ ವೈದ್ಯರುಂಟು ಧನ ।
ಸೋಗಿಗಳು ಬಹಳ ಆಡವೇಶ ॥೩೧॥

ಪರಿಮಾರ್ಜೆ ಹಿರಿಯರಿಗೆ ಸಾಪರೀಕ್ಷೆಯನಳಿದು ।
ವರಪುತ್ರ ಜನನ ಹಬ್ಬದೊಳು ಡಾಕ್ಟರಿರ ।
ಲಾ ರೋಗಿ ಮರಣ ಆಡವೇಶ ॥೩೨॥

ಕರುಣೆ ಸಾಂತ್ವನಭರಿತ ವರಧ್ಯೇಯಸ್ಮಿತಭಾವಿ ।
ವರಸೇವೆ ನಿಷ್ಠೆ ವೈದ್ಯ ಸಾವಿರಕೊಬ್ಬ ।
ರಿರವ ಕಂಡಿಹೆನು ಆಡವೇಶ ॥೩೩॥

ಬುದ್ಧಿ ಭ್ರಂಶಾದವಗೆ ಶುದ್ಧಕೇಸರಿಸುಫಲ ।
ವಿದ್ದರಸಲಿಂಬು ಸ್ಮೃತಿಸಾಗರವಟಿ ಕ್ರಮು ।
ಬದ್ಧವಿಡೆ ಶಾಂತ ಆಡವೇಶ ॥೩೪॥

ತುಳಸಿವೀಳ್ಯೆಲೆ ಬಿಲ್ವದೆಲೆ ಸಮತೆ ಕಲೆತರಸ ।
ದೊಲಿದು ಗ್ರಹಿಸಲ್ಕೆ ಪಥ್ಯದಿರೆ ಹಳೆಯದಾ ।
ತಲೆನೋವು ಮಣ್ಣು ಆಡವೇಶ ॥೩೫॥

ಅರೆದೆಲೆಗೆ ನಾಬಳ್ಳಿ ವಿರುನೋವು ಪ್ರತಿಕಿವಿಯೆ ।
ಗುರು–ತರಣಿವಾರದುದಯದೊಳು ಹಿಂಡಲ್ಕೆ ।
ಸರಿದು ಹೋಗುವದು ಆಡವೇಶ ॥೩೬॥

ಏಳೆಯ ಮಲಪಿತ್ಥಕ್ಕೆ ತುಳಿಸಿ ವೀಳ್ಯೆಲೆ ಬಿಲ್ವ ।
ದೆಲೆಯುರಸ ಗ್ರಹಿಸೆ ಶೀತಾಂಶನಳಿದಿರಲು ।
ಸುಳಿಯದದು ಸತ್ಯ ಆಡವೇಶ ॥೩೭॥

ಭಸ್ಮ ಬಾಣತಿ ಹೃದಯಕೋಶ ಬೂದಿಯುಮಾಸಿ ।
ಹೊಸ ಕುಡಿಕೆ ಜಲದಿವಿಡುತೇಳು ದಿನ ಕುಡಿಯೆ ।
ಕುಸುಮರುಜೆ ಮಣ್ಣು ಆಡವೇಶ ॥೩೮॥

## ಸಾರ್ಥಕ–ನಿರ್ಥಕ

ನಿರ್ಥಕತೆಯ ತಿಳಿದು ಸಾರ್ಥಕತೆ ಸಾಧಿಸೈ ।
ವಿರು ಬಂಜೆಯಳಿದು ಹೊಸಚಿಗುರದಿಂ ಬೆಳೆಯು ।
ಭರದಿಂದ ಭರದೆ ಅಡವೇಶ ॥[illegible]

ನಾಮುಗಳಿಸದ ಬಾಳು ಪ್ರೇಮವಿಲ್ಲದ ನೇಹ ।
ಸೋಮಧರ ಭಕ್ತಿವಿರದವನು ಬಂಜಿ ಬರಿ ।
ನಾಮಧಾರಿಗಳು ಅಡವೇಶ ॥[illegible]

ಕತ್ತಿಗಳ ಬಡಿದಾಟ ಮುತ್ತು ತತ್ಪಕ್ಕಲ್ಲ ।
ಸತ್ಯಕ್ಕೆ ಮಾತ್ರ ದಬ್ಜಕೋರ್ವನು ಚಿತ್ತ ।
ನಿತ್ಯದಿಂ ಸಿದ್ಧ ಅಡವೇಶ ॥[illegible]

ಧನ ಭೂಮಿ ಸಂಚಯದದನುಭವವ ಕಲಿಯುವದು ।
ಘನರಡ್ಡಿ ಕುಲದಿಂ ಕಲೆಯ ಸಂಚಾಳರಿಂ ।
ವಿನಯ ಕುರಿಯಿಂದ ಅಡವೇಶ ॥[illegible]

ನಾವಿಂದೇಕಾಗ್ರ ಭೂಮಿಯಿಂದುಪಕಾರ ।
ನಾವಿನಿಂ ತಾರಣದ ಗುಣಾಗ್ರತೆಯು ।
ಸವಿಗುಣವ ಗ್ರಹಿಸು ಅಡವೇಶ ॥[illegible]

ತಪ್ಪೊಂದು ವೆನಬೇಡ ಒಪ್ಪು ಕೃತಿಕೆಡಿಸುವದು ।
ಸಪ್ಪಗಿದೆವೆಂದು ಕಪ್ಪು ತಿನ್ನಲು ಹೋಗಿ ।
ತಿಪ್ಪೆಗೂಡುವನು ಅಡವೇಶ ॥[illegible]

ತಾಳಿ ಕಂಠಕೆ ಚನ್ನ ತಾಳುಬಾಳುದು ಚನ್ನ ।
ಮೇಳಗತಿ ಚನ್ನ ಸಾಲಸಿರಿ ನರಗಿಂತ ।
ಆಳುನರ ಚನ್ನ ಅಡವೇಶ ॥[illegible]

ಪ್ರಕೃತಿ ಕೋಪಕೆ ಯಾರು ಅಕಲು ಹೇಳುವರಯ್ಯ ।
ಕುಕ್ಕತಿಯು ಪೂರ್ವ ಸುಕೃತಿ ಭಾವಿಡಬಾರ್ದೆ ।
ಯಾಕೆ ಮೂಕಾದೆ ಅಡವೇಶ ॥[illegible]

ವಿದ್ಯುತ್ತದಾ ಜ್ಯೋತಿ ವಿಧ್ಯಾರ್ಥದಾಖ್ಯಾತಿ ।
ಶುದ್ಧಾತ್ಮ ಭೂತಿ ಸಿದ್ಧ ಚಿಜ್ಜ್ಯೋತಿಯನು ।
ಬಿದ್ದು ನೋಡದಿರು ಅಡವೇಶ ॥೪೭॥

ಅಲ್ಲೋರ್ವನಿಲ್ಲೋರ್ವ ಬಲ್ಲನಿರಹಂಬಾವಿ ।
ಯುಳ್ಳವರ ಕಂಡಿಹೆನು ಕಿಂತು ಅಭಿಮಾನಿ ।
ಗಳೆಲ್ಲೆಡೆ ಕಾಣು ಅಡವೇಶ ॥೪೮॥

## ಪ್ರೇಮಪಂಥ

ಪ್ರೇಮದಿಂ ಬಂಧ ವಿಶ್ರಾಮ ಸತ್ಯಾಶ್ರಯವು ।
ನಾಮವಿಖ್ಯಾತ ಬ್ರಮರಗೋಪಿಕೆಯರಾ ।
ಸಾಮರಸ ಚಿರದಿ ಅಡವೇಶ ॥೪೯॥

ಪ್ರೇಮದೊಳು ನಿಯಮಿಹುದೆ ನಾಮದೊಳು ಬೆಡಗಿಹುದೆ ।
ಕಾಮಿಗೆಂತಿಹುದು ಶಬರಿಯೆಂಜಲರಮ್ಯ ।
ತಾಮಸಗೆವೆಂತು ಅಡವೇಶ ॥೫೦॥

ಐದೇಂದ್ರಿಯೊಳು ಪ್ರೇಮವದುವುಂಟೆವೆನಿತಿಲ್ಲ ।
ಹೃದಯ ಸುಂದರಿರೆ ಜಗವೆಲ್ಲ ಸೌಂದರ್ಯ ।
ವಧುವಾಗಿ ವರನು ಅಡವೇಶ ॥೫೧॥

ಜಾತಿ ಸಿರಿವಂತಿಕೆಯು ಖ್ಯಾತದನುಪಮರೂಪು ।
ಮಾತು ಬಲ್ಲಿತನ ಬೇಕಿಲ್ಲ ಕೃಪೆಗೆ ನೀ ।
ಭೀತ ಸುಪ್ರೇಮ ಅಡವೇಶ ॥೫೨॥

ವಿದುರು ಪ್ರಲ್ಹಾದನಿಗೆ ವ್ಯಾಧಂಗೆ ಕರಿಯಂಗೆ ।
ಮಧುರೆ ಮಲ್ಲಮಗೆನವನೊಲಿದನೇತರಿಂ ।
ವಿದನರಿತು ಸಾಗು ಅಡವೇಶ ॥೫೩॥

ಸುರೆ ಸಿರಿಯು ತಾಮಸಿಕನುರೆ ಪ್ರೇಮದುಚಿತಲ್ಲ ।
ಗುರುದೇವ ಧರ್ಮದತಿಥಿ ದಾಸೋಹ ಪ್ರಿಯ ।
ಗಿರಿದೈವ ಪ್ರಿಯನು ಅಡವೇಶ ॥೫೪॥

ಚಲುವೆ ಒಳ ಹೊರಗಿಲ್ಲ ಚಲುವೆಗರೆ ತನುವಿಟ್ಟ ।
ನೆಲೆಗೊಂಡ ಸ್ಥಿತಿಗೆ ಬಾಧೆವಿರದೇನೊಂದು ।
ತಿಳಿಸುತಿಹರೇನು ಅಡವೇಶ

ಪತಿ ಚಂಚಲಿರೆ ಸತಿಯು ಪತಿಪ್ರೇಮನಳಿದಿಹಳಿ ।
ಸತಿ ಚಂಚಲಿರಲು ಪತಿಪ್ರೇಮುದಿಂ ವರ್ಜ್ಯ ।
ಪ್ರೀತಿ ಬೆಲೆಯತ್ತ ಅಡವೇಶ

ದಾರಿವೆಲ್ಲೆಡೆಯುಂಟು ದಾರಿವೆಲ್ಲರಿಗುಂಟು ।
ಕಾರಿಕೊಳ್ಳದದ ಸಹಕಾರದವಿತದದ ।
ಥಾರೆ ವಿರುದೆತ್ತ ಅಡವೇಶ

## ಪಾಪ–ಪುಣ್ಯ

ಕನಸಿನಾ ಕೃತಿಪಾಸ ಪುಣ್ಯಲೇಪಿಲ್ಲವಗೆ ।
ಇನಿತು ಶಿಶು ಬಾಲಕಾವಸ್ಥೆಯ ಕೃತಿಗೆ ।
ಯಣುವಿರದು ಪಾಪ ಅಡವೇಶ

ಪ್ರವೃತ್ತಿಯೆ ಬಂಧನವು ನಿವೃತ್ತಿಯೆ ಫಲತೆ ಮಹ
ಕುವೃತ್ತಿಯಿಂದಪವಾದವು ಜೀವನಕೆ ।
ಸುವೃತ್ತಿಯೆ ಪುಣ್ಯ ಅಡವೇಶ

ನಿಯಮವಿಡಿದಿಹ ಜೀವಿ ಸುಯಶದಾ ಸುಖಭಾವಿ ।
ಪಯಪಾನದಂತೆ ಪ್ರಕೃತಿಯನುಗತಿ ನರಗೆ ।
ಶ್ರೇಯಾಂಕವಹುದು ಅಡವೇಶ

ಗೋಡೆಗೆಸೆದಿಹ ಚಂಡು ಒಡನೆ ಮರಳುತ ಪುರುಷ
ನೆಡೆಗೆ ಚಿತ್ರಿಂತು ಪರಪೀಡೆಯದು ಪಾಪ ।
ನುಡಿಗೆ ದೃಷ್ಟಾಂತ ಅಡವೇಶ

ಅವರವರ ಕರ್ಮಗಳುಯವರಿಂಗೆ ತತ್ಫಲವು ।
ತೀವ್ರವಿದ ನಂಬು ಶೀತಮುಟ್ಟೆಲು ಶೀತ ।
ತೀವ್ರಾನುಭವವು ಅಡವೇಶ

ವರಪುಣ್ಯದಿಂ ತನುವು–ಪರರಿಂಗೆ ಫಲನೀಡಿ ।
ಧರಿಸಿರುವ ಪುಣ್ಯ ವೃಕ್ಷಗಳಿಗ್ಯಾವಾಗ ।
ಪುರುಷ ನರಜನ್ಮ ಅಡವೇಶ ॥೬೩॥

ಪೂರ್ವ ಕರ್ಮವೆ ಜನ್ಮಾಧಾರಕೆ ಕಾರಣಿರೆ ।
ಪರ್ಣ ಕರ್ಮೋನು ಉದುರು ತೆಲೆ ಚಿಗಿಯುದಕೆ ।
ಪೂರ್ಣ ಧರ್ಮೋನು ಅಡವೇಶ ॥೬೪॥

ಸೋರುತಿಹತನು–ಯಾತ–ವೆರಡು ಪಾತ್ರತೆಯೊಂದೆ ।
ಬರಿದಾದ ಕುಡಿಕೆ ಪ್ರಾಣಳಿದ ತನುಯಾತ್ರೆ ।
ಚರಿತಾಂಶವೊಂದು ಅಡವೇಶ ॥೬೫॥

ಪುಂಡಗೆಲ್ಲಿಯು ಪುಣ್ಯ ಷಂಡಗೆಲ್ಲಿಯು ಭೋಗ ।
ಪಿಂಡ ಪೋಷಣೆಗೆ ಮೊಲೆಹಾಲು ಮಗುವಿಂಗೆ ।
ಮುಂಡೆಯಿಂದಲ್ಲ ಅಡವೇಶ ॥೬೬॥

ತನ್ನ ಕೃತಿ ತನಗೆ ಫಲವನ್ನೆರಿಗೆವೆಂತುಂಟು ।
ತನ್ನೆರಳು ತನ್ನ ಹಿಂದಿಂದೆ ಹೊರಡುವುದು ।
ಚನ್ನರಿತು ಸಾಗು ಅಡವೇಶ ॥೬೭॥

ಪುಣ್ಯವಂತರು ಕಡಿಮೆ ಪುಣ್ಯಫಲ ವುಣ್ಣುತಿಹ ।
ರನ್ಯಕುಲ ಬಹಳ ಪುಣ್ಯರರು ಸಂಪೂಜ್ಯ ।
ರುನ್ನತೆಯೆ ನಿತ್ಯ ಅಡವೇಶ ॥೬೮॥

ಬಂಧ–ವೃಂದ

ನರನಾರಿಯಿಂ ಬಂಧ ನಾರಿನರನಿಂ ಬಂಧ ।
ಗುರು–ಮಠಕೆ ಬಂಧ ಒಂದೊಂದರಲಿ ಬಂಧ ।
ವಿರುದಯ್ಯ ವೃಂದ ಅಡವೇಶ ॥೬೯॥

ಸ್ಥೂಲರೂಪದಿ ಬಂಧ ಕಾಲನಾಜ್ಞೆಯೆ ಬಂಧ ।
ಕಾಲಸಹಬಂಧ ಸೂಕ್ಷ್ಮರೂಪದಿ ಬಂಧ ।
ಮಾಲೆಗಳು ಬಂಧ ಅಡವೇಶ ॥೭೦॥

ಜಾಲ ಬಂಧಿತ ಸಿಂಗ ಬಲವೆಂತೊದೆಳೆಯುಂತೊ ।
ಬಲದೆಳೆಯದಿಲಿಯು ಕಡಿದುಹಾಕುವ ಚಿತ್ರ ।
ಮೇಲುವೆನಬೇಕು ಅಡವೇಶ ॥೬೧॥

ತಂದೆತಾಯಿಯುವಿರದ ಬಂದ ಭೂಪನು ಆರು ।
ಇಂದುಧರನೋರ್ವ ವಿನ್ನುಳಿದ ಬೆರಿಕೆಯುದ ।
ಚಂದಾದ ಚವರಿ ಅಡವೇಶ ॥೬೨॥

ಕಾಮ ಪ್ರೇಮಗಳೆರಡು ನಾಮ ನೇಮಗಳೆರಡು ।
ಸೋಮ ಸೋಮಧರ ಸಂಬಂಧ ಸಂಸಾರ ।
ವಿಮಲಗುರು-ಶಿಷ್ಯ ಅಡವೇಶ ॥೬೩॥

ತುಸು ರಕ್ತವಿರೆ ಬಾಧೆ ಹಸಿರಕ್ತವಿರೆ ಬಾಧೆ ।
ಹಸಿ-ಬಿಸಿಯು ಬಾಧೆ ಹೊಸರಕ್ತಯುದಯಿಸಿರೆ ।
ಹಸಿರು ಜಗವೆಲ್ಲ ಅಡವೇಶ ॥೬೪॥

## ಕನ್ನಡನಾಡು

ಚನ್ನ ನಡೆ ನುಡಿಪೂರ್ಣ ಧನ್ಯ ಶರಣರ ಬೀಡು ।
ಮಾನ್ಯದಾಧ್ಯಾತ್ಮತೆಯ ಯೋಗಿ ಕುಲಕೋಟಿ ।
ಕನ್ನಡದನಾಡು ಅಡವೇಶ ॥೬೫॥

ಪ್ರತಿಹಬ್ಬ ಹುಣ್ಣಿವೆಗೆ ಸತತಮೃಷ್ಟಾನ್ನಸುಖ ।
ದತಿಯಾದ ತೃಪ್ತಿ ಪಡೆಯುದಕೆಯತಿಥಿಗಳೆ ।
ರೀತಿಯಿಂ ಬನ್ನಿ ಅಡವೇಶ ॥೬೬॥

ನೀರರುಚಿ ಟೆಂಗುರುಚಿ ತೀರರುಚಿ ಮತಿಯುರುಚಿ ।
ಸಾರರುಚಿ ಬೋಧೆ ವಚನಾಂಗ ಮಧುರಾಂಗ ।
ಶರಣಗುಣರುಚಿರ ಅಡವೇಶ ॥೬೭॥

ಶಿಲೆ ಕರೆಯುತಿದೆ ಜಗದ ಕಲೆರುಚಿ ಪ್ರವಾಸಿಗಳ ।
ಕುಲಕುಲನೆ ನಗುತೆ ಗಂಭೀರ ಮುದ್ರೆಗಳ ।
ದೊಲವು ತಿಳಿದಿಹರೆ ಅಡವೇಶ ॥೬೮॥

ಹುಳಿಬಾನ ಕಾರೆಳ್ಳು ಬಿಳಿಜೋಳದಡಿಗೆಯು ।
ಹುಳಿಪುಂಡಿಪಲ್ಲೆ ಸವಿಯಲ್ಕೆ ಬನ್ನಿಕೈ ।
ಬಳಿಯ ಕನ್ನಡಕೆ ಅಡವೇಶ ॥೭೯॥

ಕಲಾಭಗ್ನ–ಶಿಲೆಯುಕರೆ

ಮನಹರಣ ಕಲೆಮೂರ್ತಿ ಮನಃಕ್ಲೇಶದಿಂದು ಸಹ ।
ಮನವಿ ಮಾಡುತಿರೆ ಮನನಯನ ಸುಳಿಯರಿತು ।
ಸನಿಹ ಬರರಾರು ಅಡವೇಶ ॥೮೦॥

ಹಾಳುಗೆಡಹಿದರು ಹಾಯ್ ! ಕೀಳು ಯವನರು ಹೀನ ।
ದಾಳಿಯಿಂ ಭಗ್ನ ಶಿಲೆಕರೆಗೆ ಕಿವುಡರರು ।
ಶೀಲಚಿತ್ತಹರು ಅಡವೇಶ ॥೮೧॥

ಮರುಗುತಿವೆ–ಮರಳುತಿದೆವಿರುವಹಳೆ ಜೀವಾಂಶ ।
ಮೆರಗು ಪಡೆಯುತಿವೆ ಮರಗುವವರಾರುಂಟು ? ।
ಕರಗುತಿವೆ ಕಲ್ಲು ಅಡವೇಶ ॥೮೨॥

ಮೂಲಗುಣ ವಿಷಬೀಜ ನೆಲಿಸುತ್ತ ಹಾಲಿರಿಸಿ ।
ಬೆಳೆಸುತಿಹರಯ್ಯ ಶಿವ! ಜನಕೆ ಮತಿನೀಡು ।
ಕಲೆಗಾಯ್ತು ಕೇಡು ಅಡವೇಶ ॥೮೩॥

ವಾಣಿಯವುಗಳಿಗಿಲ್ಲ ವಾಣಿಹೊರಡದುದತಿಯ ।
ಹೀನಾಯ ಮಾನದಪಮಾನದಿಂ ಕರೆಯು ।
ಮೌನಗೀತದಲಿ ಅಡವೇಶ ॥೮೪॥

ಕರವಿಡಿದು ಬೇಡುತಿವೆ ಧರಿಸದಿರಿ ಪರಧರ್ಮ ।
ವಿರಿಸಿರನ್ಯರೊಳು ಕನ್ನಡ ಪ್ರತಿಷ್ಠೆಯದ ।
ಸಾರಸದ್ವಸ್ತು ಅಡವೇಶ ॥೮೫॥

ಮಡದಿ ಮುಡಿಯನು ಹಿಡಿವ ತುಡಗನಾವನೆವಿರಲಿ ।
ತಡೆವ ನರನಾರು ಹೊಡೆತೆನೆಗೆ ಕುಟಿಲರಿಂ ।
ಒಡೆಯರಿಹರೆತ್ತ ? ಅಡವೇಶ ॥೮೬॥

ಇನ್ನಾದರೇಳಿ ಮನ ಹುಣ್ಣುವಿರುವದುವಿನ್ನು ।
ದಣ್ಣಗಳೆ ! ಹುಕ್ಕ–ನೀವಾಗಿ–ಬಿಕ್ಕುತಿಹೆ ।
ಹನಿಹನಿಸು ಹೊರಟೆ ಅಡವೇಶ ॥೮೭॥

ನೋಡುತಿಹರ್ಬೈ ನಗ್ನ ನೋಡರರು ಮುಖಭಗ್ನ ।
ಒಡಲಜನು ಮೂಲ ನೋಡುತಿರೆ ಹೊರಡುವರು ।
ನೋಡರರು ಶೀಲ ಅಡವೇಶ ॥೮೮॥

ಜನುವೊಮ್ಮೆ ಮರಗೊಮ್ಮೆ ಮಾನಳಿದು ಬರಡೊಮ್ಮೆ ।
ವೇನಾಯ್ತು ಬಾಳು ಹಾಳು ಕಲೆ ಹಾಯ್ ! ಜಾಗ್ರ ।
ದನುಮಾನವೆನಗೆ ಅಡವೇಶ ॥೮೯॥

ಹಸಿವೆ ! ಬಹುಹಸಿವೆ–ಹೊಸರಸ ನೀಡುವವನೆತ್ತ ।
ಹಸಿವು ಬೇರಿಹುದು ಅರಿತು ಬಿಸಿ ರಸ ಧರಿಸು ।
ಹಸಿವು ಪೂರ್ಣಾಂಗ ಅಡವೇಶ ॥೯೦॥

ಕುಲವೆಲ್ಲ ಕೂಗುವೆನು ಶಿಲೆಯಾದರೇನಾಯ್ತು !
ಕಲೆ ಕೂಗು ಭಗ್ನ ಮರ್ಯಾದೆ ಕಥೆ ನಗ್ನ ।
ಕಾಲವಿದು ವಿಘ್ನ ಅಡವೇಶ ॥೯೧॥

ಬೀಜ–ಗುಣ

ರೀತಿಗುಣಬಿಡದೆಂದು ಖ್ಯಾತನೀತಿಯುಮುಂಟು ।
ಪತ್ತಾರ ಶೆಟ್ಟಿ ಶಿಂಪಿಗರು ಶಿಷ್ಯರಿರೆ ।
ಮಿತಿಲಾಭ ಬಿಡರು ಅಡವೇಶ ॥೯೨॥

ಜಾತಿ ಪದ್ಧತಿ ಪ್ರತಿಯೆ ಸತತ ಹೊರಾಡೆನುವ ।
ಮಾತು ಮಧುರರರು ನಳಿದಿಹರೆ ತನ್ನೊಡಲ ।
ಜಾತಿ ಪ್ರೇಮತ್ವ ಅಡವೇಶ ॥೯೩॥

ತರಣಿಗುಣ ಹಿರಿಯರೊಳು ಶರಣ ಗುರು ಮಂತ್ರಿಯೊಳು ।
ನಾರಿನರರೊಳಗೆ ವಿರಲು ಆಸ್ಥಾನಗಳು ।
ತರಣಿಯಿಂ ಮೇಲು ಅಡವೇಶ ॥೯೪॥

ರವಿಗಿಲ್ಲ ಭಿನ್ನಮತಿ ಸವಿಗಿಲ್ಲ ಸೀಮೆಯನು ।
ಭಾವವೆಲ್ಲರೊಳುವಿಲ್ಲ ಸುರೆ ಕಾಮಿಣಿಗೆ ।
ಸುವಿಚಾರವಿಲ್ಲ ಅಡವೇಶ ॥೯೫॥

ಜಾತಿಜೊತೆ ಧರ್ಮುಂಟು ಮಾತುಜತೆಮತಿಯುಂಟು ।
ಜೊತೆಯ ಸಂಸ್ಕೃತಿಯು ಜ್ಯೋತಿವಿಡುವದು ಜೊತೆಗೆ ।
ರೀತಿ ಕಲಿಸುವದು ಅಡವೇಶ ॥೯೬॥

ಗುಣವ ಧರಿಸಲು ಜಾಣನಣುಧರಿಸದಿರೆ ಕೋಣ !
ಬಣವಳಿದು ಬಾಳು ಗುರಿಯವಿಡದಿರೆ ಗೋಳು ।
ಗುಣಿಕೋಣ ಜಾಣ ಅಡವೇಶ ॥೯೭॥

ಕಳ್ಳತನ ಮಾಡೊ ಜೆಲೆಯುಳ್ಳ ಮಹಿಮರಡಿ ।
ಯೊಳ್ಳೆಗತಿಸಿದ್ಧ ಬಸವನರ ಮನೆಗಳ್ಳು ।
ಯೊಳ್ಳೆಯವನಾದ ಅಡವೇಶ ॥೯೮॥

ಸತಿ ಸೀತೆ ತನು ಮೋಹಿ ರತರಾಮ ದುಃಖಿತನು ।
ದಾತ್ಮದುಪಾಧಿವಶ ಸ್ತ್ರೀಪುರುಷರಾಕಾರ ।
ಜಾತಿ ಪ್ರತ್ಯಕ್ಷ ಅಡವೇಶ ॥೯೯॥

ಜನಕನಾಸ್ಥಾನದೊಳ್ದಗಣಿತ ಬುಧಸಂಗಮವು ।
ಮುನಿಯಷ್ಟವಕ್ರನನ ಕಂಡನಗೆ ಮಾತ್ರ ।
ತನುಲಕ್ಷ ತಿಳಿಯೊ ಅಡವೇಶ ॥೧೦೦॥

ರುಚಿತಿಳಿಯದೀ ಪಾತ್ರ ಮಚಗಾರ ಬಹಳುಂಟು ।
ಯೋಚಿಸದೆ ಸ್ಥಿತಿಯ ಬರಿಯದಾಡಂಬರಕೆ ।
ಯಚಲಮೋಹಕರು ಅಡವೇಶ ॥೧೦೧॥

ಬಣ್ಣ-ಭಾವ

ಲೋಕ ದೃಷ್ಟಿಯರನುಜ ನಾಕೆಂಟುವಿರಲೇನು ।
ಮುಕುರ ನಿರ್ಮಲದ ನರನೋರ್ವನಿರೆ ಸಾಕು ।
ನಕಲಿನಿಂದೇನು ಅಡವೇಶ ॥೧೦೨॥

ಸರಿತ ಕಂಡೊಡೆ ನಾಣ್ಯ ಸರನೆ ಚಲ್ಲುವ ಗಾಂಪ ।
ಕುರುಡ ಕುಂಟರರು ಬೇಡಿದೊಡೆ ಕಿವುಡೆಜ್ಜೆ ।
ಸರಸರನೆ ಕಂಡ ಅಡವೇಶ ||೧೦೩||

ತುಡುಗನಿಗೆ ತುಡುಗೆನಲು ಗಡಬಡಿಸುತೇಳುವನು ।
ತುಡಗಿರದ ಭಾವಿ ಬಂಧುರದ ಮುಂದೋಟ ।
ದೊಡಗೂಡಿ ವಿಮಳ ಅಡವೇಶ ||೧೦೪||

ಸಣ್ಣವರ ತಪ್ಪುಗಳು ಸಣ್ಣಾಗಿಯಡಗುತಿರೆ ।
ಅಣ್ಣಗಳ ದೋಷ ನಿಧಾನದಿ ಬೆಳೆಯುತಲಿ ।
ಹುಣ್ಣೊಡೆದು ಭಾಸ ಅಡವೇಶ ||೧೦೫||

ಶಟ್ಟರಿಗೆ ತಕ್ಕಡಿಯು ಭಟ್ಟರಿಗೆ ವೈದಿಕವು ।
ಜುಟ್ಟುಸಮ ಮೋಟೆ ದೇಶಕಿರೆ ಜಂಗಮಗೆ ।
ದಿಟ್ಟಕಾಯಕವು ಅಡವೇಶ ||೧೦೬||

ಬರಿಸಗುವ ನಾರಿಯಳ ಪರಿವಿರಡೆಯುಳುತಿರುವ ।
ನರನ ನಂಬದದು ಸೂರ್ಪಣಖಿ–ವಿಷದುಂಡೆ ।
ಭರಿತ–ಮಂಚಣ್ಣ ಅಡವೇಶ ||೧೦೭||

ನೀರ್‌ಗೋಳಿ ಮರಿ–ಕೋಳಿಮರಿವೆರಡುರೂಪೊಂದೆ ।
ಮರಿಯು ವಿರುವಾಗ ದಿನಗಳೆಯೆ ಗುಣಭಿನ್ನ ।
ದರಿವು ನರಕುಲದಿ ಅಡವೇಶ ||೧೦೮||

ಕರಿಮುಖದ ನರ ಹೃದಯ ಕರಿಕಾಡಿಗಿಹುದಂತೆ ।
ಕರಿಯೊಳಗೆ ಮದವು ಬಂದಾಗ ಹಾನಿಯದು ।
ಎರೆಭೂಮಿ ಶ್ರೇಷ್ಟ ಅಡವೇಶ ||೧೦೯||

## ನಿಶ್ಚಯಿಸು

ಗುರುಚಕ್ರವ್ಯೂಹದಲಿ ಕಿರಿಯಾಭಿಮನ್ಯುಗತಿ ।
ಸರಿಯ ಸಂಸಾರದೊಳಗೆ ನರ ಮರಣಹುದು ।
ಮುರಿದು ಬರಬಹುದೆ ಅಡವೇಶ ||೧೧೦||

ಗಂಧಪ್ರಿಯರುಂಟು ನಿಜಗಂಧ ಹೃದಯದೊಳು ಮತಿ ।
ಯಿಂದ ಧರಿಸಿಹರೆ ಮೇಲು ಪ್ರಿಯರುಂಟು ನಿಜ ।
ನಂದರಿಯರಾತ್ಮ ಅಡವೇಶ ॥೧೧೧॥

ಸಿದ್ಧ ಸಾತ್ವಿಕರಾಗ ಸಿದ್ಧಗೊಳಿಪುದು ಪುಣ್ಯ ।
ವೃದ್ಧಿಯಿಂ ಭೋಗ ನಿಷ್ಕಾಮ್ಯದಿಂ ಜನ್ಮ ।
ತಿದ್ದಿಕೊಳ್ಳುವರೆ ಅಡವೇಶ ॥೧೧೨॥

ಸಾಧುವಿರೆ ಬುದ್ಧನಿರೆ ಸಾಧಕದ ಸಿದ್ಧನಿರೆ ।
ಬೋಧಿಪಾಚಾರ್ಯ ವಿರಲವರೊಳಭಿಮಾನ ।
ಬಾಧಿಸದೆವಿಹುದೆ ಅಡವೇಶ ॥೧೧೩॥

ಸಂಸ್ಕೃತದ ಭಾಷೆಮತಿ ಸಂಸ್ಕೃತಿಯ ನರಿತೆಯಾ ।
ಕಂಸ ಗುಣದಂಶ ಬಿಡದೆ ಬಾಳುವ ಪಕ್ಷಿ ।
ಹಂಸವಹುದೆಂದು ಅಡವೇಶ ॥೧೧೪॥

ಹಾಂಶಗಟ್ಟಿಹ ಭೂಮಿಯಂಶ ಗುಣಿವಿದ್ವಾನ ।
ಸಂಸ್ಕಾರ ಸಂಸ್ಮರಣವೆಂದು ನಿರ್ಧರಿಸು ।
ಸಂಸರ್ಗಾನುಭವ ಅಡವೇಶ ॥೧೧೫॥

ಸತ್ವ ಶಾಪವೆ ಶಾಪ ಕತ್ತೆ ಕಿರಿಚಲು ಶಾಪ?
ಯತ್ನಿರದೆ ಹಸಿವೆಯಾಗ್ವಂತೆ ಹೊಸತಾಗು ।
ಸತ್ತು ಬಾಳದಿರು ಅಡವೇಶ ॥೧೧೬॥

ಇನ್ನುಳಿದ ರಸಗಳವು ಧನ್ಯನಂ ಮಾಡುವವೆ ।
ಧನ್ಯಾತ್ಮರಸವು ಸ್ಥಿತಪ್ರಜ್ಞ ಸ್ಥಿತಿಕೊಡುಗೆ ।
ನಿನ್ನು ನಿಶ್ಚಯಿಸು ಅಡವೇಶ ॥೧೧೭॥

ವಿಮಲ ನೀನಾಗು

ಮಧುಪ ವೈಷಿಕ ಹೇಯ ವಧೆಯ ಭಂಜನ ಸಂಗ ।
ದೊದವಿ ಕೇಡಹುದು ನೀತಿಸವಿನಯ ನಿಧಿಯೆ ।
ದುದಯ ಮಧುಸಿದ್ಧಿ ಅಡವೇಶ ॥೧೧೮॥

ಸಾಕ್ಷಿತತ್ವದಿ ಗತಿಯೆ ಕುಕ್ಷಿಯಂ ತುಂಬಿಸುವ ।
ಮೋಕ್ಷಿಕರ ಸಂಗ ಬೇಡವದು ಸಾತ್ವಿಕದ ।
ಲಕ್ಷಗಣ ಶ್ರೇಷ್ಠ ಅಡವೇಶ ॥೧೧೯॥

ಸಾಧುಗತಿ ನಡೆಯದಾ ವಾದಭಂಡರ ಸಂಗ ।
ಬಾಧೆ ತಪ್ಪದದು ಚೋದಕೃತಿಕುಲವಳಿದು ।
ವೇದಗತಿ ಮತಿರೆ ಅಡವೇಶ ॥೧೨೦॥

ಬೆಕ್ಕು ಭಾವನೆವಿಡಿದ ವ್ಯಕ್ತಿಸಂಗನುಚಿತವು ।
ತಕ್ಕ ಸಮಯದಲಿ ಶೀವಕ್ಕಿಯುರಗಾಕ್ಷಿ ।
ಕುಕ್ಕುದನು ಬಿಡದು ಅಡವೇಶ ॥೧೨೧॥

ಒಳ್ಳೆಯವ ನೊಳ್ಳೆಯನೆ ಯುಳ್ಳ ಶ್ರೀಗಂಧವದು ।
ಧೂಳಿಗ್ರಹಿಸದದು ಧೂಳಿಗ್ರಹಿಸುತೆ ಗಂಧ ।
ಮಳ್ಳನಿದ ತಿಳಿಯೊ ಅಡವೇಶ ॥೧೨೨॥

ವಿರತ-ಗುರು-ಭಕ್ತರೊಳು ಚರಿತೈಕ್ಯ ಮುಪ್ಪುರಿಯ ।
ಹರಿಯದಾ ಹಗ್ಗ ತಂತಿಮುರಿದೊಡೆ ತೊಲೆಯು ।
ಮುರಿಯು ಬಹುದೇನು ಅಡವೇಶ ॥೧೨೩॥

ಪ್ರೇಮದಿಂ ಶ್ರವಣಮೇಣ್ ಸೋಮಕುಲಸತ್ಸಂಗ ।
ರಮಣೀಯದಿಂದೆ ಜ್ಞಾನಿಗಳ ಸನ್ನಿಧಿಯೆ ।
ವಿಮಲ ನೀನಾಗು ಅಡವೇಶ ॥೧೨೪॥

ಉಣ್ಣಲಕ್ಷಿಡಿದು

ಕತ್ತಿಮರಿ ಸುಂದರಿರೆ ಮುದ್ದು ಕೊಡುವದುವುಂಟೆ ।
ಚಿತ್ತರಿತೆನೆನುತ ಮತ್ತೆ ಮಾದಕರಸದಿ ।
ರಕ್ತಿಯದು ಮಲ್ಲ ಅಡವೇಶ ॥೧೨೫॥

ಸುರೆದೆಲೆಗೆ ಜಾರಿಣಿಗೆ ಸಿರಿಯಹರಿಸುವರಯ್ಯ ।
ಪರಮದಾಸೋಹ ಜೋಳಿಗೆಯು ಬರಲೆದುರು ।
ಕುರುಡ ಮೇಣ್ ಕಿವುಡ ಅಡವೇಶ ॥೧೨೬॥

ವಿಷವು ಮೋಹದಿಬಿದ್ದು ಕುಸುಮ ಕೆಡಿಸುದುವೇಕೆ ।
ವಿಷದ ರುಚಿಸುಡಿಯು ವಿಷಭರಿತ ಮೂಲಿಕೆಯು ।
ಮಸೆದಿರುವ ಚೂರಿ ಅಡವೇಶ ||೧೨೭||

ಗ್ರಹಿಸುತ ವಿಷಯವನು ಸಹನಶಕ್ತಿಯುಮಿರದೆ ।
ಗಹನ ತನು ಪೀಡೆಯಾಗಲ್ಕೆ ಬಳಲೇಕೆ ।
ಸಹಿಸೊ ದಹನವನು ಅಡವೇಶ ||೧೨೮||

ಮೇಲೇರಿದವ ಕೆಳಗೆ ಮೂಲಿವಿಚ್ಚಿಸಲಾರ ।
ಶೀಲಾತ್ಮವಿತ್ ಶೋಕಂ ತರತಿ ನುಡಿರೆ ।
ಜಾಲದೆಡೆಯೇಕೆ ಅಡವೇಶ ||೧೨೯||

ಸುಟ್ಟುಕೊಂಡಿಹ ಕಂದ ಮುಟ್ಟಲಾರಗ್ನಿವರ ।
ಬಟ್ಟೆಯರಿತ ಮತಿವಿದರಂತೆ ವಿಷಯಗಳ ।
ಕಟ್ಟಿನೊಳಗಿಲ್ಲ ಅಡವೇಶ ||೧೩೦||

ತುಸು ಕುಡಿವೆನೆನಬೇಡ ತುಸುಸ್ಪರ್ಶವಿದ್ಯುತ್ತು ।
ದಸುನೀಗಿಸುದು ಏನೆವಿರೆ ಬಹುಕಠಿಣ ।
ವಾಸನೆಯ ತ್ಯಾಗ ಅಡವೇಶ ||೧೩೧ ।

ತನ್ನ ಬೆರಳಂ ತಾನೆ ಚನ್ನ ಕಡಿದೊಡೆ ಕ್ರೋಧ ।
ರನ್ನರೆಡೆವೇಕೆ ಸ್ವಯಂದೋಷಿಯಾಗಿರಲು ।
ಉಣ್ಣುಲಕ್ಷಿಡಿದು ಅಡವೇಶ ||೧೩೨||

ಮೂರ್ಖ

ಕರೆಯೊಲೆವಿರದ ನರ ಒರುತಪ್ರವಚನದಿಚ್ಛೆ ।
ನಿರಿಸಲವ ಮೂರ್ಖ ಮರ್ಯಾದೆ ಸಿಗದಿರಲು ।
ಮರಗುವವ ಮೂರ್ಖ ಅಡವೇಶ ||೧೩೩||

ಆರತಿಯುವಿಡಿದು ಸತಿ ಮರಿಯಾದೆ ಕೊಡಲವಳು ।
ಹರಿದು ಹೋಗುತಿರೆಯುಂತ್ಯದಲಿ ಕರವಿಡಿದು ।
ಕರೆದಳುವ ಮೂರ್ಖ ಅಡವೇಶ ||೧೩೪||

ಪಿತನು ಸುತನಿಗೆ ಸುರೆಯು ಮತಿಯು ವ್ಯಭಿಚಾರದೆಡೆ ।
ಮಾತೆ ಮಗಳಿಂಗೆ ಜಾರತನ ಕಲಿಸುವಾ ।
ಮತರು ಮಹಾ ಮೂರ್ಖ ಅಡವೇಶ ॥೧೩೫॥

ದೋಷವನು ಮಾತಾಡಿ ಭೂಷಣವ ಕಳಕೊಂಡು ।
ಕೋಶ ಪಂಡಿತನು ನಿಜ ಮೂರ್ತಿಗಳ ಮೇಲೆ ।
ರೋಷಿಸುವ ಮೂರ್ಖ ಅಡವೇಶ ॥೧೩೬॥

ಆಮಂತ್ರಣೆರದೆಗತ ಸೋಮಧರ ಸತಿಯಂತ್ಯ ।
ದಾ ಮಾನ್ಯವಿರದೆ ಬಂದಪನಪಮಾನದಿ ।
ರಾಮಾರಿ ಅಂತ್ಯ ಅಡವೇಶ ॥೧೩೭॥

ಸಂಧಿಸುವ ಗಂಧಸುಖ ಹೊಂದುವೆನ್ನುವ ಮೂರ್ಖ ।
ವಿಂದು ಗುರು ಸತಿಯ ಹೊಂದಿ ಕಲೆಕಳಕೊಂಡ ।
ಹಂದಿಗುಣಿ ಮೂರ್ಖ ಅಡವೇಶ ॥೧೩೮॥

## ಕುಜನ-ಆಚಾರ

ದುರಜನರ ಸಂಗ ಫಲ ದುರಿತೆಂಬ ಗುರುಮತವು ।
ವಿರು ಮೂಕ ಜೊತೆಗೆಯೊಡನಾಟ ಸಾಧ್ಯನರ ।
ಸರಿ ಮೂಕನಾಗಿ ಅಡವೇಶ ॥೧೩೯॥

ಧರ್ಮಾರ್ಥ ಸೇವೆಯಕೆ ಮರ್ಮಿಗಳು ಬರದಿಹರು ।
ಕರ್ಮಸುರೆ ಭಾಂಡ ಕಂಡೋಡಿ ಕೂಡುವಾ ।
ದುರ್ಮತರ ಸಾಲು ಅಡವೇಶ ॥೧೪೦॥

ತನ್ನ ಸಮವೆಳೆಯಲ್ಕಿ ಚನ್ನಾಗಿ ಯತ್ನಿಪರು ।
ಕುನ್ನಿಗಳ ಜೊತೆಗೆ ಭಯವಿಲ್ಲ ದೈತ್ಯರೊಳು ।
ಧನ್ಯ ಪ್ರಲ್ಹಾದ ಅಡವೇಶ ॥೧೪೧॥

ಗುರು ಬಂದ ಸುದ್ದಿಯನು ಪರಿಕೇಳಿ ಪಾಲಿಸರು ।
ಕರಸತಿಯಳಾಜ್ಞೆ ಶಿರ ಹೋದರೂ ಬಿಡರು ।
ಗುರುವಾಜ್ಞೆದೂರ ಅಡವೇಶ ॥೧೪೨॥

ಮಡದಿಯರ ಹುಟ್ಟೀಟ ಬಿಡದೆ ಸಹಿಸುತ ಗುಪ್ತ ।
ಬೆಡಗು ಭಾವಿಗಳು ಗುರು ಬೈದು ಬೋಧಿಸಲು ।
ಒಡನೆ ಕ್ರೋಧಾಗ್ನಿ ಅಡವೇಶ ॥೧೪೩॥

ವರಧರ್ಮ ಕಾರ್ಯಕ್ಕೆ ಸಿರಿದಾನ ಮಾಡೆನಲು ।
ಬರಗಾಲವೆನ್ನ ದುರುಳರ್ಗೆ ಕುಡಿಯಲ್ಕೆ ।
ಬರವಿಲ್ಲವೇನಃ ಅಡವೇಶ ॥೧೪೪॥

ಸೋಟರಾ ಚಲ್ಲಾಟ ಮಠಮಾನ್ಯದೊಳಗಿರಲು ।
ದಿಟವಾದ ಶಾಂತಿ ಪಡೆಯುವಾಸ್ಥಲವೆಲ್ಲಿ ।
ಕುಟಿಲರಳಿವೆಂದು ಅಡವೇಶ ॥೧೪೫॥

ಹೆಳವನೇಕಾಕ್ಷಿ ಮೋಣ್ ಕುಳ್ಳ ಜೊಂಚಗೈನರರು ।
ಸುಳಿವಸ್ಥಾನದಲಿ ಕಾಳುಮರೆ ಕೃತಿಸಿದ್ಧ ।
ಕೀಳು ಪುಳಸುತ್ತ ಅಡವೇಶ ॥೧೪೬॥

ಕುಹಕ ಕೃತಿಕೀಳಂಗೆ ಮಹತೆಕುಲ ಜೊತೆಯಾಸೆ ।
ಬಹಳವಿರಲೇನು ಗಿಳಿ-ಹದ್ದು ಸಂಗಸುಖ ।
ಸಹಿಸಬಹುದೆಂತು ಅಡವೇಶ ॥೧೪೭॥

ಒಳಿತೆನಿತು ಯೋಚಿಸದ ಕೊಳಕು ಸುವಿಚಾರಿಗಳ ।
ಸಲಿಗೆ ಸುಖವಿಲ್ಲ ವಸ್ತ್ರವನು ಕಡಿಯುವಾ ।
ದಿಲಿಯ ಕುಲದವರು ಅಡವೇಶ ॥೧೪೮॥

ಸತ್ತವನ ಹುಗಿಯಲ್ಕೆ ಹತ್ತು ಸುರೆ ಶಿಶಿಬೇಕು ।
ಕತ್ತೆಯಿಂ ಕೀಳು ಜಂಗುಳಿಯ ಚಲ್ಲಾಟ ।
ನಿತ್ಯ ನಡೆದಿಹುದು ಅಡವೇಶ ॥೧೪೯॥

ಅತಿಥಿ ಬಂದೊಡೆ ನರನು ಮಥನಮತಿಯಾಗುವನು ।
ಸತಿ ಬಂಧು ಬರಲು ಕುಣಿತದಿಂ ಮನ್ನಿಸುವ ।
ಸತಿಯ ಸಂಸಾರ ಅಡವೇಶ ॥೧೫೦॥

ಚಾರಿತ್ರ್ಯಹೀನರರ ನರರು ಮನ್ನಿಸುತಿಹರು ।
ಭೂರಿ ಸಂಪತ್ತು ಕುತಂತ್ರದಧಿಕಾರ ।
ಕಾರಣವು ತಿಳಿಯೊ ಅಡವೇಶ ॥೧೫೧॥

ಕುಡಿದವನು ಸ್ವರ್ಗವನು ಕಡೆಗೆ ಸೇರುವನೆನಲು ।
ಕುಡಿಯದ ಮಹಾತ್ಮ ಕಡಲು ಸೇರಿದರೇನೊ ।
ನುಡಿಯೊ ಸುರೆ ಭಂಟ ಅಡವೇಶ ॥೧೫೨॥

ಮಹಿಮರರ ವಾಸ್ತವ್ಯ ಬ್ರಹ್ಮಪುರದೊಳಗುಂಟು ।
ಕುಹಿಕಿಗಳ ವಾಸ ಬಾಹ್ಯಾಂಗ ವಿಷಯಾಂಗ ।
ಬಹುವಿದಧರಂಗ ಅಡವೇಶ ॥೧೫೩॥

ಜೊಪ್ಪರೇ ಛೀಮೆನುತ ತಪ್ಪು ಕೃತಿಗೆಳೆಯುತಲಿ ।
ಗಪ್ಪ ಹೊಡೆಯುವರು ಬೆಪ್ಪನಾಗ್ಬೇಡ ವಿದ ।
ನೊಪ್ಪಿ ಸಾಗದದು ಅಡವೇಶ ॥೧೫೪॥

ಸಿರಿಯ ಬಳಸಲು ಬೇಡ ಕರಕೊಂಡು ಉಣಬೇಡ ।
ಮರೆತು ಲಾಭವನು ಬಿಡದೆಂದು ಬೋಧಿಪಗೆ ।
ವರನಾಮವೇನು ಅಡವೇಶ ॥೧೫೫॥

## ದಾನ-ಮಾನ

ಅಭಿಮಾನದಾನಾನ್ನ ಶುಭವಾಗದೆಂದೆಂದು ।
ಅಭಿಮಾನಿ ಬಸವನಾ ಪಾಡು ನೀ ನೋಡು ।
ಪ್ರಭು ತೃಪ್ತಿಯೊಳಗೆ ಅಡವೇಶ ॥೧೫೬॥

ತನುದಾನ ಸ್ವಾರ್ಥವಶ ಮನುಜರೊಳಿರೆ ಹೃದಯದ ।
ದಾನವದು ಶ್ರೇಷ್ಠ ತನುದಾನದಾ ವನಿತೆ ।
ಮನವು ವಿಟನೆಡೆಗೆ ಅಡವೇಶ ॥೧೫೭॥

ಹೃದಯದಾ ದಾನಿಮಣಿ ಮಧುರೆ ದ್ರೌಪದಿವಿರಲು ।
ಸಾಧು ಪ್ರಿಯ ಶಾಮನಾಗಮಿಸಲವಳಡಿಯೆ ।
ಕ್ರೋಧಿಯತಿ ತೃಪ್ತಿ ಅಡವೇಶ ॥೧೫೮॥

ಹೃದಯಾರ್ಪಿತ ನಾಟ್ಯವೆ ಹೃದಯ ಹೃದಯೈಕ ಸ್ಥಿತಿ ।
ಪದವಿ ಪದವೋಚ್ಚ ಸ್ಮರಣೀಯ ಸನ್ಮಾನ ।
ದಾದರದ ಕೊಡುಗೆ ಅಡವೇಶ ॥೧೫೯॥

ದಂಡಶತ ಕಜ್ಜೆದುದು ಮುಂಡೆಗೂ ತಿಳಿಸಲ್ಕೆ ।
ಗುಂಡುದುಡ್ಡೊಂದು ದಾನಮಾಡಿರಲದನು ।
ಕಂಡವಗೆ ಕಥನ ಅಡವೇಶ ॥೧೬೦॥

ಜ್ಞಾನದಪ್ರೈತಿಗಳಿದನ್ನದಾನವ ಮಾಡಿ ।
ಅನ್ನ ನೀಡುದಕೆ ಲೆಕ್ಕಸಿಮಗೇಕಯ್ಯ ।
ಜ್ಞಾನಫಲ–ಕೃಪಣ ? ಅಡವೇಶ ॥೧೬೧॥

ಮೌನ

ಚಂದ ಜೀವಿಯು ಜಗದಿ ಹೊಂದಿರುವ ಹಂಗಡವು ।
ವೃಂದವಿವಿಧಾಂಗ ಕಲ್ಪನಾಸೃಷ್ಟಿ ಯೇ ।
ಕಾಂತ ಜೀವಿಯದು ಅಡವೇಶ ॥೧೬೨॥

ನಾಮಮೌನರವರು ಮೌನ್ ಮೌನಿಗಳು ಬಹಳುಂಟು ।
ಕಾಮನಾರಾಜ್ಯ ಕಲ್ಪನೆಗಳ ಮೌನವೇ ।
ಶ್ರೀ ಮೌನವೆನ್ನು ಅಡವೇಶ ॥೧೬೩॥

ಎನಿತಿದ್ದರೇನು ಜಗದೇನಾದರೊಂದು ನುಡಿ ।
ಗುಣ ಗುಣತೆ ಗುಂಪುವಿದು ಕಾರಣಿನೋಗುರು ।
ಮೌನದೊಳಿರೆಂದ ಅಡವೇಶ ॥೧೬೪॥

ನೋಟವಳಿದವರಿಲ್ಲ ನೋಟವೆಲ್ಲರೊಳಿಹುದು ।
ನೋಟವಿರೆವಿಲ್ಲ ಜಡಾಂಶ–ಚೇತಾಂಶ ।
ನೋಟ ಬಹುಕಡಿಮೆ ಅಡವೇಶ ॥೧೬೫॥

ವಾಣಿಬಂಧಿಸಿದೆನೋ ಮನಬಂಧ ಮರೆತೆಯಾ ।
ಗುಣ ಗುಣತೆ ಸಾಕು ಬೇಕೆಂಬ ಕೈ ಸೊನ್ನೆ ।
ಮೌನಿ ಬಕಪಕ್ಷಿ ಅಡವೇಶ ॥೧೬೬॥

ಓರ್ವನಿರೆ ಜಗಳಿಲ್ಲರೀರ್ವರಿರೆ ಭಯವಿಲ್ಲ ।
ಮೌನವಿರುವಲ್ಲಿ ಸಂತಸ ನಿಶಬ್ದತೆಯು ।
ಮೂವರಿರೆ ಸಂತಿ ಆಡವೇಶ ॥೧೬೭॥

ತೆರೆಗಳಿಗೆ ಕೊನೆಯಿಲ್ಲ ಮರೆಯರಿವು ಮಿತಿಯಿಲ್ಲ ।
ಗುರಿಯಂತ್ಯವಿಲ್ಲ ಮೂಲರಿವು ಸರಳಲ್ಲ ।
ನಿರುಪಾಧಿಯೆಲ್ಲ ಆಡವೇಶ ॥೧೬೮॥

ಯಲೆಯಾವುದಳುಕದಿರೆ ಯಳುಕುದೆಲೆಯಶ್ವತ್ಥ ।
ಸಳಸಳನೆ ಬಿಡದೆ ತೆರೆಗುಪ್ತ ಕುಸುಮರಜ ।
ದಾಳಿ ಜಗದಾಟ ಆಡವೇಶ ॥೧೬೯॥

ಸಿರಿವಂತ ಸತಿನುಡಿಯ ಮರೆಯುಡೆಯೆ ಪಾಲಿಸನು ।
ಮಿರುವಂತೆ ಹೃದಯನಾದ ನುಡಿಯಾದರಿಸು ।
ಮರೆತು ಹೊರಹುಂಡು ಆಡವೇಶ ॥೧೭೦॥

## ಶೀಲ

ಕೂಳಿಂಗೆ ಸತ್ತರ್ರೈ ಜಾಲದೊಳು ಬೆರೆತರ್ರೈ ।
ಲೋಲೆಗೆ ಕೆಲವರು ಅಲ್ಲೋರ್ವನಿಲ್ಲೋರ್ವ ।
ಶೀಲಕ್ಕೆ ಸತ್ತ ಆಡವೇಶ ॥೧೭೧॥

ಸಭೆಯೊಳಗೆ ಶೀಲತನ ದಾಬೆಯೊಳು ಹೊಲೆಸೂಳಿ ।
ಯಬಲಿ ತನು ತೃಪ್ತಿ ಸ್ವರ್ಣಕುಂಭದ ಮೂತ್ರ ॥
ಜಲವೆನುವರಾರು ಆಡವೇಶ ॥೧೭೨॥

ಹೊರಗೆ ಮಡಿಯೊಳಗೆ ಕಿಡಿ ಪರಿತೆಗೆದದುರಗವನು ।
ಕರದಿ ಗ್ರಹಣೆಂತು ಸೂರ್ಪಣಖಿ ರೂಪಿಣಿರೆ ।
ಚರಿತೆರ್ವೇನಾಯ್ತು ಆಡವೇಶ ॥೧೭೩॥

ಶೀಲ ಶಾಲೆಯ ಹುಡುಕು ಜಾಲಲೋಲೆಯು ಕೆಡಕು ।
ಕೀಲಿರದ ಗ್ರಹಕೆ ಗ್ರಹಣ ಹಿಡಿಯುವದಯ್ಯ ।
ಶೀಲವಿದು ಬೇಲಿ ಆಡವೇಶ ॥೧೭೪॥

ನಿಜಗುಣಿ

ವರಷಟಸ್ಥಲ ಬ್ರಹ್ಮಿ ಗುರುವು ಭುಜಲಿಂಗನಡಿ ।
ವರಶಿವಾದ್ವೈತನರಿತ ನಿಜಗುಣಿ ಮಣಿಯು ।
ನಿರತ ಸ್ಮರಿಸುವೆನು ಅಡವೇಶ ॥೧೭೫॥

ನಿಜಗುಣಿಯ ಗ್ರಂಥಗಳು ಸುಜನರ್ಗೆ ರುಚಿಸುವವು ।
ಕುಜಕುಲಕೆಯಲ್ಲ ಕಪಿಗೆ ವರರತ್ನ ಮಹ !
ತೇಜದರಿವೆಂತು ಅಡವೇಶ ॥೧೭೬॥

ನಿಜಗುಣಿಯ ಗ್ರಂಥಾರ್ಥ ತೇಜ ಶಿವಪುತ್ರಯತಿ ।
ರಾಜ ಕೃಪೆಯಿಂದ ಭ್ರುಕುಟಿಲತೆಯೊಳು ಅರಿತು !
ನೈಜ ಸಂತೃಪ್ತಿ ಅಡವೇಶ ॥೧೭೭॥

ನಿಚ್ಚಟ ನೀತಿ

ಮುತ್ತೈದೆ ಮರ್ಯಾದೆ ಮುತ್ತಾರಿಗುಂಟು ವರ ।
ಚಿತ್ತರಿತ ಶಿಷ್ಯ ಸಮನಾರು ಜಗದೊಳಗೆ !
ಸತ್ಕೃತಿಯೆ ನೀತಿ ಅಡವೇಶ ॥೧೭೮॥

ಮೆದುಳೆಲ್ಲರಿಗುಂಟು ಮಧುರವೆಲ್ಲರಿಗುಂಟೆ ?
ಹಾದಿವೆಲ್ಲರಿಗೆ ಗಾದೆವೆಲ್ಲರಿಗುಂಟೆ ।
ಸಾಧನೆಯು ಕಠಿಣ ಅಡವೇಶ ॥೧೭೯॥

ನೀತಿವಂತರ ನಿಷ್ಠೆಯೋತು ಬಿಡಿಸುದುವೇಕೆ ।
ಭೂತಳದ ಯತಿಯು ಮಾರ್ಗದರ್ಶಕರಾಗಿ ।
ಪ್ರೀತಿಯಿಂದ್ಗತಿಯು ಅಡವೇಶ ॥೧೮೦॥

ದೊಡ್ಡಗಿಡದಾಶ್ರಯವು ದಡ್ಡರಿಗೆ ಲೇಸೆಂಬ ।
ದೊಡ್ಡ ನುಡಿವಿರಲು ಮುಳ್ಳುಜಾಲಿಯದೆಷ್ಟು ।
ದೊಡ್ಡದಿರಲೇನು ಅಡವೇಶ ॥೧೮೧॥

ಚಿಕ್ಕಗಿಡದಾಶ್ರಯವು ಚೊಕ್ಕವಿರಲೇನು ಸರಿ ।
ಚೊಕ್ಕ ವಿಶ್ರಾಂತಿ ಸಿರಿಭರಿತ ಲಂಪಟರ ।
ಕಕ್ಕುಲತೆ ವಿಷವು ಅಡವೇಶ ॥೧೮೨॥

ಬಂಡೆಯಂ ನಂಬಿರಲು ಬಂಡೆ ತಲ್ಪುದುವೆಂತು ।
ಕಂಡ ನುಡಿ ಕೇಡ ಮುಂಡೆಯರ ನುಡಿ ನಂಬಿ ।
ಚಂಡಾಟವೇಕೆ ಅಡವೇಶ ||೧೪೩||

ಹುಲ್ಲಿನೊಳು ಕಿಚ್ಚಿಟ್ಟು ಜೆಲ್ಲದಾ ನುಡಿಯೇಕೆ ।
ಬಲ್ಲಿದರೆ ನಿಮಗೆ ಸಲ್ಲಲಿತ ನಿರ್ಮಲದ ।
ಸಲ್ಲು ನುಡಿ ಬರದೆ ಅಡವೇಶ ||೧೪೪||

ಹೊಲಸು ಕಳೆಯುವ ಪೊರಕೆ ಪಾದರಕ್ಷೆಯು ತೊಗಲು !
ಮೂಲಿವೆರಡಕ್ಕೂ ತಾನವಿರೆ ಪೀಠದಾ ।
ಮೇಲೆವಿಡುದಲ್ಲ ಅಡವೇಶ ||೧೪೫||

ಕೋಶವಾದರೂ ಓದು ದೇಶವಾದರೂ ನೋಡು ।
ಭಾಷೆ ತಪ್ಪದಿರು ವೀ ಗಾದೆ ಮಾನವಗೆ ।
ಪೋಸ ಮಾಡದದು ಅಡವೇಶ ||೧೪೬||

ಬೇಕೆಲ್ಲರಿಗಾಶ್ರಯುವ ಸಾಕೆನ್ನನರರಾರು ।
ಸಾಕೆನುವ ಪುರುಷನಡವಿಯೊಳಿರಲಾಶ್ರಯ ।
ದೇಕಾಂತ ಗವಿಯು ಅಡವೇಶ ||೧೪೭||

ಒಪ್ಪು ತಂಬಿಗೆ ಬುತ್ತಿ ದುಪ್ಪಾಟಿ ಪಯಣದಲಿ ।
ಒಪ್ಪಿ ಹಿತದುಕ್ತಿ ನಿರ್ಲಕ್ಷಿಸಲು ಬೇಡ ।
ಸೊಪ್ಪಿನಾ ಪಲ್ಯ ಅಡವೇಶ ||೧೪೮||

ಬೆದರುದನ ಭಾವರಡಿ ಒದರುಬಡಕಿಯ ನಾರಿ ।
ಕೆದರಿದಾ ಧೂಳು ನೇಹಫಲ ತಿಕ್ಕಾಟ ।
ಕಾದು ನೋಡದಿರು ಅಡವೇಶ ||೧೪೯||

ಗುಡಿಸಲಿಂ ಗುಡಿ ಸಿದ್ಧದೊಡೆಯನಿಂ ಗಢ ಸಿದ್ಧ ।
ಕಿಡಿಗೇಡಿಯಿಂದ ಕಿಡಿ ಸಿದ್ಧದೊಡಕಿನಿಂ ।
ಕೆಡಕುತನ ಸಿದ್ಧ ಅಡವೇಶ ||೧೫೦||

ಬಂಡೆಯಂ ನಂಬಿರಲು ಬಂಡೆ ತಲ್ಪುದುವೆಂತು ।
ಕಂಡ ನುಡಿ ಕೇಡ ಮುಂಡೆಯರ ನುಡಿ ನಂಬಿ ।
ಚಂಡಾಟವೇಕೆ ಅಡವೇಶ ॥೧೮೩॥

ಹುಲ್ಲಿನೊಳು ಕಿಚ್ಚಿಟ್ಟು ಬೆಲ್ಲದಾ ನುಡಿಯೇಕೆ ।
ಬಲ್ಲಿದರೆ ನಿಮಗೆ ಸಲ್ಲಲಿತ ನಿರ್ಮಲದ ।
ಸಲ್ಲು ನುಡಿ ಬರದೆ ಅಡವೇಶ ॥೧೮೪॥

ಹೊಲಸು ಕಳೆಯುವ ಪೊರಕೆ ಪಾದರಕ್ಷೆಯ ತೊಗಲು !
ಮೂಲಿವೆರಡಕ್ಕೂ ತಾನವಿರೆ ಪೀಠದಾ ।
ಮೇಲೆವಿಡುದಲ್ಲ ಅಡವೇಶ ॥೧೮೫॥

ಕೋಶವಾದರೂ ಓದು ದೇಶವಾದರೂ ನೋಡು ।
ಭಾಷೆ ತಪ್ಪದಿರು ವೀ ಗಾದೆ ಮಾನವಗೆ ।
ಮೋಸ ಮಾಡದದು ಅಡವೇಶ ॥೧೮೬॥

ಬೇಕೆಲ್ಲರಿಗಾಶ್ರಯುವ ಸಾಕೆನ್ಪ ನರರಾರು ।
ಸಾಕೆನುವ ಪುರುಷನಡವಿಯೊಳಿರಲಾಶ್ರಯು ।
ದೇಕಾಂತ ಗವಿಯು ಅಡವೇಶ ॥೧೮೭॥

ಒಪ್ಪ ತಂಬಿಗೆ ಬುತ್ತಿ ದುಪ್ಪಾಟಿ ಪಯಣದಲಿ ।
ಒಪ್ಪು ಹಿತದುಕ್ತಿ ನಿರ್ಲಕ್ಷಿಸಲು ಬೇಡ ।
ಸೊಪ್ಪಿನಾ ಪಲ್ಯ ಅಡವೇಶ ॥೧೮೮॥

ಬೆದರುದನ ಭಾವರಡಿ ಒದರುಬಡಕಿಯ ನಾರಿ ।
ಕೆದರಿದಾ ಧೂಳು ನೇಹಫಲ ತಿಕ್ಕಾಟ ।
ಕಾದು ನೋಡದಿರು ಅಡವೇಶ ॥೧೮೯॥

ಗುಡಿಸಲಿಂ ಗುಡಿ ಸಿದ್ಧದೊಡೆಯನಿಂ ಗಢ ಸಿದ್ಧ ।
ಕಿಡಿಗೇಡಿಯಿಂದ ಕಿಡಿ ಸಿದ್ಧದೊಡಕಿನಿಂ ।
ಕೆಡಕುತನ ಸಿದ್ಧ ಅಡವೇಶ ॥೧೯೦॥

ನಾರದನು ಗಾನ ಪ್ರಿಯ ನಾರಿಸದಕಲಹಪ್ರಿಯ ।
ನಾರದೆಲ್ಲಿಹನು ಚಕಮಕಿಯು ನಿಜದಲ್ಲಿ ।
ನಿರಂತರ ಸತ್ಯ ಆಡವೇಶ ॥೧೯೧॥

ಕಪ್ಪಿರಲು ಕಳೆಲೇಸು ಸಪ್ಪಡಿಗೆ ಹಿತಲೇಸು ।
ಮುಪ್ಪುವಿರೆ ಸೌಖ್ಯ ತಪ್ಪಿದೊಡೆ ಒಡೆಯನಡಿ ।
ಯೊಪ್ಪುಗೆಯು ಲೇಸು ಆಡವೇಶ ॥೧೯೨॥

ಯುದ್ಧದೊಳು ಕವಿಯಿರಲಿ ಗದ್ದೆಯೊಳು ಜಲವಿರಲಿ ।
ಮುದ್ದು ಮಧುರಿರಲಿ ಲಿಂಬುರಸ ಜೊತೆವಿರಲಿ ।
ಶುದ್ಧ ಶುದ್ಧಿರಲಿ ಆಡವೇಶ ॥೧೯೩॥

ಎನ್ನಡಿಗೆಯಿಂದು ಬಹಳುಣ್ಣಬೇಡ ಹೊರಲಕ್ಕೆ ।
ನಿನ್ನುದರವಲ್ಲ ಎಲ್ಲವಿರೆ ಶಕ್ತಿಲ್ಲ।
ಮುನ್ನಡೆಯುವಿಲ್ಲ ಆಡವೇಶ ॥೧೯೪॥

ಪಲ್ಲಕ್ಕಿಯೇರಿದಗೆ ಪಲ್ಲಟಂಜಿಕೆಯುಂಟು ।
ನೆಲ್ಲಕ್ಕಿಪ್ರಿಯಗೆ ನಿಲ್ಲು ಅಂಜಿಕೆಯುಂಟೆ ।
ಎಲ್ಲಕ್ಕೂ ಮಿತಿಯು ಆಡವೇಶ ॥೧೯೫॥

ಮುಟ್ಟಿದೊಡೆ ಘಣನಾದ ಮುಟ್ಟದಿರೆ ಮೌನಾದ ।
ಘಂಟೆಯಾಗದಿರು ಯಾಗುತಿರು ಪ್ರಸಂಗದಿ ।
ಹುಟ್ಟಿರೂಪಾಗು ಆಡವೇಶ ॥೧೯೬॥

ಸೃಷ್ಟಿ ಧರ್ಮದೊಳಿರಲಿ ಮುಷ್ಟಿ ಮಧುರದೊಳಿರಲಿ ।
ಶ್ರೇಷ್ಠ ರಸರಂಗ ಸಮೇಷ್ಠಿಯ ಚಿಂತನವು ।
ಕಷ್ಟಸಹನಗುಣ ಆಡವೇಶ ॥೧೯೭॥

ಗಗನದೊಳು ಗಿಡವಿಲ್ಲ ರಾಗದೊಳು ಮಿತಿಯಿಲ್ಲ ।
ಬಗಳಿ ತಾ ಬಲ್ಲ ಕುಳ್ಳನೆಲ್ಲವ ಬಲ್ಲ ।
ಸಗಣಿಯಿಂದೆಲ್ಲ ಆಡವೇಶ ॥೧೯೮॥

ಅಪ್ಪಕೊಡುತಿಹನೆಂದು ಕಪ್ಪನೀಡಲುಬೇಡ ।
ಅಪ್ಪ ಸಪ್ಪಗಿರೆ ವೈರಿಯಪ್ಪನುವಾಗು ।
ಹೆಪ್ಪ ಹಸಿಯಾಗು ಅಡವೇಶ ॥೧೯೯॥

ಕಪ್ಪ ಕೊಡುವದಕಿಂತ ಕಪ್ಪರಾಶ್ರಯ ಸಾಕು ।
ಒಪ್ಪೊತ್ತನುಂಡು ಒದ್ದಾಡುಕಿಂತು ಗತಿ ।
ಯೊಪ್ಪಂದ ಸಲ್ಲ ಅಡವೇಶ ॥೨೦೦॥

ಬದ್ಧಜೀವಿಗಳುಂಟು ಶುದ್ಧಕ್ಕೆ ಸಿದ್ಧಾಗು ।
ಗೆದ್ದು ಓಡದಿರು ತಿರುಬಗರಿ ಪತನೊಮ್ಮೆ ।
ಬಿದ್ದು ಬಿಡಬೇಡ ಅಡವೇಶ ॥೨೦೧॥

ಕೆಂಡ ಮುದ್ದಿಡುದಲ್ಲ ಕಂಡು ನೀಡುದುವಲ್ಲ ।
ಗಂಡ್ರಾವಿ ನುಡಿಯ ಪಾಲಿಪನು ಗಂಡಸನೆ ।
ಹೆಂಡಿ ಪಾಂಡ್ರವನು ಅಡವೇಶ ॥೨೦೨॥

ಕಪ್ಪಿರಲಿ ಕೆಂಪಿರಲಿಯೊಪ್ಪಾದ ಕಂಠಿರಲಿ ।
ತಿಪ್ಪೆಯದ ಬಳ್ಳಿ ಕೂಷ್ಮಾಂಡ ಫಲಕೊಡುಗೆ ।
ರೆಪ್ಪೆಯೊಳು ಜ್ಯೋತಿ ಅಡವೇಶ ॥೨೦೩॥

ರಾಡಿ ಪ್ರಿಯ ಮಹಿಷಕುಲ ನೋಡಿಪ್ರಿಯ ಮಾನವರು ।
ಜೋಡಿವೆನಬೇಕು ಹಾಸಿಗೆಯ ಪ್ರಿಯ ಹೇಡಿ ।
ನೀಡಿದನು ಏನು ಅಡವೇಶ ॥೨೦೪॥

ಹಿತ್ತಲದ ಮುಳ್ಳು ಪದಕೊತ್ತಿದರೆ ಸುಖವೆನಲೆ ।
ಹತ್ತಿರದ ಬಂಧು– ಹೆಸರಿನಾ ಮುಳ್ಳುಗಳ ।
ಕಿತ್ತಿ ಬಿಸುಡಯ್ಯ ಅಡವೇಶ ॥೨೦೫॥

ಒಡಕು ಗಡಿಗೆಯ ಪಾತ್ರ ಕುಡುಕನಾಳಾಗದಿರು ।
ಕೆಡಕುತನ ಸಿದ್ಧ ಕಡೆಗೊಮ್ಮೆ ಪ್ರಿಯುಸತಿಯ ।
ಕಡೆ ನೋಡದಿಹನೆ ಅಡವೇಶ ॥೨೦೬॥

ಮಾಡಿಕೊಟ್ಟಿಹ ಹೆಣ್ಣು ನೀಡಿದಾಧಸ ಕವಣಿ ।
ವಿಡಿದೆಸೆದ ಕಲ್ಲುಗಳ ಚಿಂತಿಸನು ನಿಜದಿ ।
ನಾಡೆ ಮತಿವಂತ ಅಡವೇಶ ॥೨೦೭॥

ಸುರತೇಚ್ಛೆ ಸ್ವೇಚ್ಛೆಯುಳ ಹರಿದ್ರ ಹಚ್ಚಿದ ಹೆಣ್ಣು ।
ಮರಳಿ ಬಿಡುತಿಹರೆ ಬಿಡದೆನುತ ಪ್ಪಾಕೊಂಡು ।
ಮರಳಿ ಮರಗೇಕೆ ಅಡವೇಶ ॥೨೦೮॥

ದುರುಳರಂ ನೋಡದಿರು ದುರಿತಫಲರವರಿಂದ ।
ಬರಲು ಜೋಕ್ಮಾರ ಪರಪೆ ಮರೆಯೊಳು ಗಣಪ ।
ರಿರವ ಸೂಚನವು ಅಡವೇಶ ॥೨೦೯॥

ಬಲ್ಲಿದಗೆ ಬಂಗಾರ ಖುಲ್ಲರಿಗೆ ಶೃಂಗಾರ ।
ನಲ್ಲನಿಗೆ ನಾರಿ ಬಗೆಬಗೆಯು ಹಸಿವೆಗಳು ।
ವೆಲ್ಲರೊಳು ಕಾಣು ಅಡವೇಶ ॥೨೧೦॥

ಸುರರೊಳಗೆ ವ್ಯಭಿಚಾರ ಪರಾಭವಗೊಳಿಸುವಿಕೆ ।
ಪರಮಾಧಿಕಾರ ಲಾಲಸತೆ ಹೊರಸೂಸಿ ।
ಹರಿದಿತ್ತು ಬಂತೋ ಅಡವೇಶ ॥೨೧೧॥

ಗ್ರಹಣ ಹಿಡಿದಿರುವಾಗ ಗ್ರಹಿಸೊ ಮಾಂತ್ರಿಕ ಶಕ್ತಿ ।
ಗ್ರಹಿಣಿವಿರದಿರಲು ಸಹಿಸು ಸಾಹಸ ರಕ್ತಿ ।
ಸಹಿಸದಿರೆ ಕಹಿಯು ಅಡವೇಶ ॥೨೧೨॥

ಕೆಲವೊಂದು ಹಿಡಿಗೂಢ ಕೆಲವೊಂದು ಪಸರಿಸು ।
ಲೋಲೆರತಿಗೂಢ ಗರ್ಭಣಿರೆ ಪ್ರಕಟನೆಯು ।
ಫಲತೆ ಹಲವಾರು ಅಡವೇಶ ॥೨೧೩॥

ಬೆಳ್ಳಗಿರೆ ಹಾಲೆನದು ಮೆಳ್ಳನಿರೆ ಮರುಳೆನದು ।
ಕುಳ್ಳನಿಗೆ ಬುದ್ಧಿ ಕಡಿಮೆನದು ಸೆಳೆಮಿಂಚು ।
ಬಳ್ಳಿ ಕಿರಿದೆನದು ಅಡವೇಶ ॥೨೧೪॥

ಭಂಡಾರ ಕೊಡಬೇಕು ಗುಂಡು ದುಡ್ಡನು ಕೊಡದು ।
ದಂಡವಿರೆ ಪೈಸೆ ಸಾವಿರಿಡೆ ಕವಡಿಸಹ ।
ದಂಡ ದಂಡವದೆ ಅಡವೇಶ ॥೨೧೫॥

ಮಿತಿವೆನದು ಸರ್ಪವಿಷ ಸತಿಯೆನದು ರಂಡಿಯುಗೆ
ಜಾತ್ರೆ ಸತತೆನದು ಸತಿಯುಳಿದು ಸಂನ್ಯಾಸ ।
ಪಾತ್ರ ಸರಳೆನದು ಅಡವೇಶ ॥೨೧೬॥

ವ್ಯಾಧಗೆಲ್ಲಿದೆ ವೇದ ಯೋಧಗೆಲ್ಲಿದೆ ಮೋದ ।
ಬೋಧವಿದುವೆಲ್ಲ ಹಾದಿ ಮಾಡದು ವಾದ ।
ಹಾದಿಗರೊಳುಂಟು ಅಡವೇಶ ॥೨೧೭॥

ಜಾತಿತ್ವ ಹೆಮ್ಮೆಯದಿ ಖ್ಯಾತರಾಗುದು ಮಲ್ಲ ।
ನೀತಿಯಿಂ ಮಾತ್ರ ನಾಮ ನಿಜ ಬೆಳಗುವದು ।
ಜೊತೆಧರ್ಮ ಹಿರಿದು ಅಡವೇಶ ॥೨೧೮॥

ದಾರ್ಶನಿಕ ಕವಿಯಾಗು ಹರ್ಷ ಕೃತಿಗನುವಾಗು ।
ಈರ್ಷೆ ಕೃತಿಯಿಂದ ದೂರಾಗು ಜೀವನದಿ ।
ದಾರ್ಶನಿಕನಾಗು ಅಡವೇಶ ॥೨೧೯॥

ನಿತ್ಯ ನೂತನ ಭೋಗ ನಿತ್ಯನೂತನರಾಗ ।
ಮಿಥ್ಯೆವಹಭಾಗ ಕೃತಿಸೋಗುವಳಿದಾಗ ।
ಸ್ತುತ್ಯ ಸುಖವಾಗ ಅಡವೇಶ ॥೨೨೦॥

ಹಡೆದವಳು ಮಲತಾಯಿ ಪಡೆದವಳ ಮಾತೃತ್ವ ।
ಕುಡಿ ಸವತಿ ಬೋರೆ ಪೇರು ಫಲ ರಸದಂತೆ ।
ಹುಡುಗ ತಿಳಿಯಯ್ಯ ಅಡವೇಶ ॥೨೨೧॥

## ಮಹಿಮ

ಆಗರ್ಭ ತಾಮಸನು ನಾಗವಿಷದಿಂ ಕ್ರೂರ ।
ಯೋಗಿವರ ಮಹತೆಯುಗಣಿತಿರೆ ಮರಳಾಬ್ಧಿ ।
ಭಾಗಧಿಕವೆಂತು ಅಡವೇಶ ॥೨೨೨॥

ಶೀಲಬ್ರಷ್ಟರು ನಿಜಗೆ ಜಾಲಬೀಸಿದರೇನು ।
ಶೀಲ ಗುರು ಕೃಪೆಯೆ ತಾನು ಸಾಗಿರೆ ಮುಂದೆ ।
ಶೀಲವಂ ಬಿಡನು ಅಡವೇಶ ॥೨೨॥

ಸಿದ್ಧಿಗಳು ನಡೆಯಲ್ಕೆ ಗುದ್ದ ಸೇರುವ ಕಾಲ ।
ಬುದ್ದು ಭಾವಿಗಳು ಶುದ್ಧಕ್ಕೆ ಬಾಗದದ ।
ಗೆದ್ದಲಿಯ ಸಮರು ಅಡವೇಶ ॥೨೪॥

ಸರಿಯಾತ್ಮದನುಭವಿಗೆ ಸಿರಬಾಗಿ ಸಾಗುವದು ।
ಕರಮಾಲೆ ಬರಲು ಬಾಗಿಧರಿಪಂತೆ ಶ್ರೀ ।
ಯರಿತಂಗೆ ಮಹತೆ ಅಡವೇಶ ॥೨೫॥

ತೆರೆಮಹತೆಯುಪ್ಪಳಿಸೆ ಸರಿಯದಾಗಿರಿಸಮತೆ ।
ಸರಿಯಾತ್ಮ ಪ್ರಿಯಗೆ ಬಿರುಸುಡಿಯುಪ್ಪಳಿಸೆ ।
ಪರತತ್ವ ಬದ್ಧ ಅಡವೇಶ ॥೨೬॥

ಆರಿರಲಿ ದೋಷ ಮನ ಕರದಿಂದವಾಗುವವು ।
ಸರನೆ ಸರಿಪಡಿಸಿಕೊಳ್ಳುತಿರೆ ಮಹಿಮರರು ।
ವಿರದು ಪಶು ನರಗೆ ಅಡವೇಶ ॥೨೭॥

ಪೂತರಂಗದ ಸುಮುದಿ ಪತಂಗದಾ ಪರಿಣಯುವೆ ।
ಖ್ಯಾತದುಷ್ಕೃತಿಯನಪ್ಪುವನೆ ನಿಜಜ್ಞಾನಿ ।
ಜೋತಿ ಜಿಜ್ಞೋತಿ ಅಡವೇಶ ॥೨೮॥

ಮೋಡದೊಳುವಿರುವವಗೆ ಗುಡುಗುಮಿಂಚಿನ ಭಯವೆ ।
ನಡೆದುದನು ಕಂಡು ನುಡಿಯುತಿಹ ಮಹಿಮಂಗೆ ।
ತಡೆ ಯಾವುದುಂಟು ಅಡವೇಶ ॥೨೯॥

## ಚಿಂತೆ–ಸಂತೆ

ಯೋಗಿಂಗೆ ಯೋಗದ್ದು ಭೋಗಿಂಗೆ ಭೋಗದಾ ।
ನಾಗಧರನಿಂಗೆ ವಿಶ್ವಕಲ್ಯಾಣ ಶಿವ
ಯೋಗಿಗಸುಷ್ಠಾನ–ಅಡವೇಶ ॥೩೦॥

ಗಗನ ಸಾಗರದೊಳಿರೆ ಬಗರಿಯಾಟದೊಳಿರೆ ।
ನಿಗಮಾಂಗ ಮಾಂಗ ಬುಧರೊಳಗೆ ಚಿಂತೆಯದ ।
ಸೋಗುಲಾಡಿತನ ಅಡವೇಶ ||೨೩೧||

ಸೂನ್ಯಳಿದ ಶಕ್ತಿಯದು ಚನ್ನಾಗಿ ಸುಡುತಸಹ ।
ಸೂನ್ಯವದು ನರನ ಕಾಣದಯೆದಹಿಸುತದು ।
ಚನ್ನರಿಂ ದೂರ ಅಡವೇಶ ||೨೩೨||

ಸೂನ್ಯಳಿಯೆ ಪ್ರಿಯವಸ್ತು ಸೂನ್ಯವಿಡೆ ಜಂಗುಳಿಯು ।
ಮುನ್ನಳಿಯಲೆರಡು ಮಹಿಮ ಮತಿಯುಹುದಯ್ಯ ।
ಸೂನ್ನಗಹನಾರ್ಥಿ ಅಡವೇಶ ||೨೩೩||

## ಬುಧ-ಮದ

ಬುಧರಮನ ಸುಧೆವಿರಲಿ ವಾದಗಳನಳಿದಿರಲಿ ।
ವಿಧಿಮೀರಿ ಕೃತಿಗೆ ಪ್ರೋತ್ಸಾಹ ನೀಡುವದು ।
ವೇದ ತುಳಿದಂತೆ ಅಡವೇಶ ||೨೩೪||

ಕಥನಕ್ಕೆಯದ್ವೈತ ಮಥನದೊಳು ಶಿಥಿಲತ್ವ ।
ಕಥೆಯೊಂದು ಕಾಣು ಸ್ಥಿತಿಯರಿತ ಸುಖಿಯಂಗೆ ।
ಕಥನವಿಹುದೆಂತು ಅಡವೇಶ ||೨೩೫||

ಗುರುಪುತ್ರ ಬಂದೊಡನೆ ಗರಗೂಢ ನುಡಿಯೇಕೆ ।
ಸ್ವಾರ್ಥಮನದಿಂದ ತೀರ್ಥಸ್ಥಾನದಿವಾದ ।
ದೂರ್ತ ಕೃತಿಯೇಕೆ ಅಡವೇಶ ||೨೩೬||

ವೇದಮೂರ್ತಿಯು ಶುದ್ಧ ವಾದನಳಿಸಲು ಬದ್ಧ ।
ಸುದ್ಧ ಸುಖಸಿದ್ದ-ವಿತಿರದ ಸ್ವಾರ್ಥಿಬುಧ ।
ಸ್ವಾದಗೇಡಿಗಳು ಅಡವೇಶ ||೨೩೭||

ಮೂಢಸಿಡಿಮಿಡಿ ಖೋಡಿ ಮೋಡಿ ಮೂರ್ಖರ ಕಂಡ ।
ನಾಡೆ ಪಂಡಿತರುವಿಂತುವಿರೆ ಮೂಢಂಗೆ ।
ನೀಡುವವರಾರು ಅಡವೇಶ ||೨೩೮||

ಭಾಷೆ ಬುಧಯುತಿಗೇಕೆ ಹೇಳಿಗುಣಪಕ್ಷಮತಿ ।
ಯಾಶೆ ಮುರ್ಯಾದೆಯನ್ಯಮತದೊಳುವಾದ ।
ವಶೀಲಿಯು ಮಾರ್ಗ ಅಡವೇಶ ॥೨೪೯॥

ಧರ್ಮ–ಕರ್ಮ

ತನ್ನಧರ್ಮವ ಬಿಟ್ಟುದನ್ಯ ಧರ್ಮದ ಕಡೆಗೆ ।
ಹೊನ್ನದಾಸೆಯಲಿ ಹೋದಂತ ನರನು ಪಶು ।
ಕನ್ನಿ ಸಮವೆನ್ನಿ ಅಡವೇಶ ॥೨೫೦॥

ಸ್ವಂತ ಸೂರತೆ ಲೇಸು ಕ್ರಾಂತಿ ಮುರಿಯಲು ನೃಪಗೆ ।
ಎಂತು ವಿರದಿರಲು ಉತ್ತರಕುಮಾರಂತೆ ।
ಕಾಂತಿ ಮುಡಿಲೊಂದೆ ಅಡವೇಶ ॥೨೫೧॥

ಸತ್ಯಮಾರ್ಗವನೊಪ್ಪಿ ಚಿತ್ತಚಂಚಲವಳಿದು ।
ನಿತ್ಯ ಸತ್ಸಂಗ ಸಚ್ಚರ್ಚೆ ಮುಹಿಮರರ ।
ಸತ್ಯಾರ್ಥ ಧರ್ಮ ಅಡವೇಶ ॥೨೫೨॥

ಸ್ವಾತಂತ್ರ ಗಳಿಸಿದುದು ಕುತಂತ್ರದ ಕೃತಿಗಿಲ್ಲ ।
ಮತಿರೀತಿ ಧರ್ಮದಾಡಳಿತ ಲಕ್ಷವಿರೆ ।
ಸ್ವಾತಂತ್ರ್ಯದುಳಿವು ಅಡವೇಶ ॥೨೫೩॥

ವರಧರ್ಮದೊಳು ರಾಜಕಾರಣದ ಸೇರ್ಪಡೆಯು ।
ಸರಿಯಂತೊ ಎಂದು–ಕೈವಾಡ ಕಂಡು ವರ ।
ಗುರುಬಂಧು ತಾಪ ಅಡವೇಶ ॥೨೫೪॥

ಧರ್ಮ ದಂಪತಿಯಂಶ ಗುರುವಂಶ ಬಿಡದಿಹರು ।
ಧರ್ಮನುಡಿ ಕರ್ಮ ತಾಯಿಸುತಮಾತ್ರ–ಗುರು
ಧರ್ಮ ಪ್ರತಿಯಹನು ಅಡವೇಶ ॥೨೫೫॥

ಗಳಿಕೆಯಲ್ಲಿಯ ಪ್ರೇಮ ಕಳಿವಲ್ಲಿವಿರಬೇಕು ।
ಕಳೆಯದಿರೆಬಾಧೆ ತಟ್ಟುವದು ಲೋಭಿಂಗೆ ।
ಕಾಲವಿದು ಜಾಲ ಅಡವೇಶ ॥೨೫೬॥

ಋತುಹುಡುಕುತನುಗಮನ ಪ್ರತಿವಿರದಿರಲದು ಗ್ರಹಣ ।
ಮತಿಯಂತರಂಗ ಪ್ರತಿಕಾರ ರಹಿತಾದ ।
ವಾತ್ಸಲ್ಯ ಧರ್ಮ ಅಡವೇಶ ॥೨೪೭॥

ಚರ್ಮವನು ಮಚಗಾರ ಕರ್ಮಫಲವೈದಿಕನು ।
ಮರ್ಮಧೂರ್ತರರು ನೀರಿಕ್ಷಿಸುತ ಸಾಗಿರೆ ।
ಧರ್ಮವೆಲ್ಲರನು ಅಡವೇಶ ॥೨೪೮॥

ಒಡಲು ತುಂಬಿರಲವಳದುಡಿಯು ತುಂಬುದು ಧರ್ಮ ।
ದಡಿಯೆ ಬಂದವನ ಸತ್ಕರಿಸುತುಪಚಾರ ।
ಬಿಡದು ತದ್ಧರ್ಮ ಅಡವೇಶ ॥೨೪೯॥

ಬರಿ ಜಾತಿವಿಭಾಗವೆ ಧರಮೆನುವ ಮೂರ್ಖರರು ।
ಪರಿಪಕ್ವ ತಿಳಿಯುತಾಚರಣೆಯೇ ಧರ್ಮ ।
ನರಿಯಬೇಕಿದನು ಅಡವೇಶ ॥೨೫೦॥

**ಜೋತಿಷ್ಯ**

ನಾರಿಂಗೆ ಜೋತಿಷ್ಯ ಧೀರನೇ ಹೇಳ್ಬೇಕು ।
ನೂರಾರು ಪ್ರಶ್ನೆ ಬಿಡದೇಳ್ವ ಘನದಂತೆ ।
ಬಿರುಗಾಳಿಯಂತೆ ಅಡವೇಶ ॥೨೫೧॥

ಮಿಥ್ಯೆನುವ ವೇದಾಂತಿ ಮತಿವಿಡಲು ಗ್ರಹಬಲದಿ ।
ಪ್ರೀತಿ ಸಾಮಾನ್ಯವಿಡುವ ಲೌಕಿಕರ ಗತಿ ।
ಸತ್ಯವೆನಬೇಕು ಅಡವೇಶ ॥೨೫೨॥

ಬರುತಿರೆ ಚುನಾವಣೆಯು ಸರಪಂಕ್ತಿಟೋಪಿಗಳು ।
ಬರೆಸಿ ಕೇಳುತಿವೆ ಗ್ರಹಬಲವ–ಯಾರೆವಿರೆ ।
ಸಿರಿಮಾತ್ರ ಬೇಕು ಅಡವೇಶ ॥೨೫೩॥



## (೩)

## ಶ್ರೀ ಸುಜ್ಞಾನಿ

**ಸಾಂಪ್ರದಾಯ**

ಸಿರಿವರಣ ಸತಿ ಸಂಗ ಮರ್ಯಾದೆವಿರುತಿಹುದು ।
ಪುರದಾಂಗಗಳಲ್ಲ ಸಾಂಪ್ರದಾಯಗಳಿಂತು ।
ಪರಿವಿಡಿದು ಧನ್ಯ ಆಡವೇಶ ॥೧॥

ಸಾಂಪ್ರದಾಯಗಳಿರಲಿ ಸಂಪು ಪದ್ಧತಿವಿಡಿದು ।
ಸೊಂಪು ಗುಪ್ತಿಹುದು ಶ್ರೀಗಂಧ ಜಗದೊಳಗೆ !
ಸಂಪನ್ನವಿಂತು ಆಡವೇಶ ॥೨॥

ಸಂಪ್ರದಾಯದುವೆಮ್ಮದಿಂಪೆಂದು ಹಂಪಕಿರೆ ।
ಜೊಂಪುವಾಗಮವು ಸರ್ವಕಾಧಾರವಿರೆ ।
ಹಂಪು ನುಡಿ ಸಲ್ಲ ಆಡವೇಶ ॥೩॥

ದಾರ್ಮ್ಯಂದೆ ಸೂಜಿರಲು ಚಾರುಬಂಧನ ಕೌದಿ ।
ವೀ ರೀತಿ ವಿರದೆ ಕಲ್ಯಾಣಕರ ಕಾರ್ಯ ।
ಪಾರವಾಗದದು ಆಡವೇಶ ॥೪॥

**ಭಕುತಿ–ಭಕುತ**

ಬಡವರಾ ಬಕ್ತಿಯಲಿ ಸಿಡಿ ಮಿಡಿಯು ತೋರುಂಟೆ ।
ಬೆಡಗು ಸಿರಿ ಭಕ್ತಿ ಶೃಂಗಾರಶವವಂತು ।
ಬೆಡಗು ಸ್ತ್ರೀ ಚಿತ್ರ ಆಡವೇಶ ॥೫॥

ಸುಖ ದುಃಖ ಬಿರುಗಾಳಿ ಸಕಲದಿಶೆಯಿಂ ಬರಲಿ ।
ಸುಖಿಯು ಶಿವ ಗುರುವಿನೆಡೆಗೆ ನಿಜಮತಿವಿಡಲು ।
ಸುಖಸುಧಾಮ ಸುಖಿ ಆಡವೇಶ ॥೬॥

ಕೂಗುನುಡಿ ದೇವಂಗೆ ಬೇಗ ಮುಟ್ಟುವದೆನಲು ।
ಜಗದಿ ಕತ್ತೆಗಳು ಕೂಗುತಿರೆ ಶಿವನೆಡೆಗೆ ।
ಹೋಗಿ ಮುಟ್ಟುವದೆ ಅಡವೇಶ ॥೭॥

ಮೂರ್ತಿ ಪೂಜಾರ್ಚನೆಯ ವ್ಯರ್ಥನಿಂದಿಸುದೇಕೆ ।
ಮೂರ್ತಿ ಪೂಜೆಗಳು ಎಲ್ಲೆಡೆಗೆ ಸಾಕ್ಷಿತ್ವ ।
ಚಿತ್ತ ಸತ್ಯಾರ್ಥ ಅಡವೇಶ ॥೮॥

ನಂಬಿದೊಡೆ ಶಂಭು ತಾಂ ನಂಬದಿರೆ ನಿಶುಂಭನು ।
ಹಂಬಲಿಡದಿರೆ ಜಗದಿ ಸಾಧ್ಯವೊಂದಿಲ್ಲ ।
ಹಂಬಲಿಡೆಯೆಲ್ಲ ಅಡವೇಶ ॥೯॥

ಕುಂಭ ದ್ರವ್ಯದ ಗಳಿಕೆ ಹಂಬಲದಿ ಮಾಡಿರಲು ।
ನಂಬಿ ಸುಖ ದೃಷ್ಟಿವಿಡದೆ ಸುಖಿಸಿಗದೆಂದು ।
ನಂಬಿ ನೀ ನೀಡು ಅಡವೇಶ ॥೧೦॥

ಪಡುವನೆಡೆ ಶಿವನಿಹನೆ ಮೂಡಣಳಿದಿಹನೇನು ।
ಬಡಗಣದ ದಿಶೆಯು ಪರದೇಶಿಯಾಯ್ತೇನು ।
ಮೃಡನು ಪರಿಪೂರ್ಣ ಅಡವೇಶ ॥೧೧॥

ಶುದ್ಧ ಭಾವಿಕ ಗುರುಗೆ ಬುದ್ಧಿಯೆನ್ನುತಮನಿತ ।
ಬದ್ಧ ಭರಮರರು ಸಿರಿಹರಣ ಮಾಡುತಿರು ।
ಕದ್ದು ಕೃತಿಕಂಡು ಅಡವೇಶ ॥೧೨॥

ಕೋಟಿಜನ್ಮಾರ್ಜಿತೈಃ ಪುಣ್ಯೈಃ ಶಿವೇಭಕ್ತಿಃ ।
ಹುಟ್ಟುದೆಂದುಕ್ತಿ ಶಿವಗೀತ ನುಡಿಸಾಕ್ಷಿ ।
ನೋಡು ಸೋಮಾಕ್ಷಿ ಅಡವೇಶ ॥೧೩॥

ಚಲುಭಕ್ತನಾನೆಂದು ಜೋಲಿ ಹೊಡೆಯದು ಹುಳವೆ ।
ಸೆಲದಿಣಚಿ ಕರಿಯ–ಪಶುಪಕ್ಷಿಗಳ ಭಕುತಿ ।
ಸುಳಿದು ನೋಡಯ್ಯ ಅಡವೇಶ ॥೧೪॥

ಅಧರ್ಮದಿ ಧರ್ಮಫಲ ಸುಧೆಯುಂಡ ಚಂಡೇಶ ।
ಸದರಮುಪೆಸುತಾ ಮರುಳೆ ನೀನೇನ್ ಪಡೆದೆ ।
ಭೇದವೋ ಬಾಧೆ? ಅಡವೇಶ ॥೧೫॥

ಮೈಲಿಂಗೆಂಜಲಮುಡಿಯು ಬಿಲ್ಲು ಬೇಡಗೆಯೆಲ್ಲಿ ।
ಸಲ್ಲಿಸಿದ ಮಾಂಸದೆಂಜಲದ ಜಲಪೂಜೆ ।
ಭಾಲಾಕ್ಷಗೊಪ್ಪು ಅಡವೇಶ ।೧೬॥

ಶಂಭು! ನಿನಗಿಂಪುಳ್ಳದಂಬಲಿಯನರ್ಪಿಸುವೆ ।
ಹಂಬಲದಿ ಮಾಂಸ ನೀನುಂಡಿಯಂತೆ ಮಧು ।
ರಂಬಲಿಯನೊಲ್ಲೆ ? ಅಡವೇಶ ॥೧೭॥

ನರ–ಸಹಜಪಾತ್ರ–ಶಿವಶರಣರಡಿದಭಿನಯತೆ ।
ಕಾರಣಿಹುದೊಂದೆ ಭಕುತರರನಾಳಾದ ।
ಮರೆತು ಮರುಳಾದ ಅಡವೇಶ ॥೧೮॥

ಬೇಡದದು ಮಡದಿಯರ ಬೇಡಿ ಮುಡಿದೆಲೊ ದೇವ ।
ಬಡತನದ ಭಕುತಿ ನೋಡುತಿರು ನೋಡದಿರು ।
ಡೆಡೆವ ಸ್ವಭಾವ ಅಡವೇಶ ॥೧೯॥

ಕಲಿಕಂಬ ಪ್ರಿಯ ಸತಿಯ ಕೊಲೆಮಾಡಲವಗೊಲಿದೆ ।
ಕಾಲನ್ನು ಕಡಿದ ಚಂಡೇಶಗೊಲಿದೆನ ।
ಗೊಲಿಮೆಂತು ನಿನ್ನ ? ಅಡವೇಶ ॥೨೦॥

ಯೋಗದಂಡ್ ಮಧ್ಯಮದಿ ಭೋಗಿಯವನಂ ಮಾಡ್ವೆ ।
ಬಗೆಯಾತರಿಂದೆ ಕರೆದುಕೊಳ್ಳು,ವೆಯನು ।
ವಾಗಿ ಮೃದುವೆನ್ನ ಅಡವೇಶ ॥೨೧॥

ಮೃಡ ! ನನ್ನ ಹೆಡೆಯುದಡಿಇಡುವಿಚ್ಛೆ ನಿನಗಿದೆಯೊ ।
ಇಡುತ ಸಂಗಡಿರು ಬಿಡೆಕೃಪೆಯ ಪೊಡರುದಿಂ ।
ದೊಡಗೂಡುತಿರು ಅಡವೇಶ ॥೨೨॥

ಕುನ್ನಿಯಿಂ ಸ್ವರ್ಗ ಬಹುಸನ್ನಿಹಿತಗಿಂತ ಶಿವ ।
ನಿನ್ನ ಕ್ರೋಧಾಗ್ನಿಯಿಂ ಮಣ್ಣುಗೂಡುವದೆ ।
ಚನ್ನಾದ ಮುಕ್ತಿ ಅಡವೇಶ ॥೩೩॥

ಕೋಪದಿಂದಹಿಸಿದೆಯೊ ಸುಪ್ರಿಯತೆ ಕಾಮನಂ ।
ಈ ಪರಮನಿರದೆ ವಾಮೆರತಿ ವೆಂತಾಯ್ತು ।
ಆ ಪಾತ್ರ ಗೂಢ ಅಡವೇಶ ॥೩೪॥

ಲೋಲೆಗುಣರೂಪುರಸ ವಿಲಾಸಿವರ್ಣಿಸುವಂತೆ ।
ನೀಲಕಂಠನನ ಕೊಂಡಾಡುತಿರಲವನ ।
ಬಾಳು ಸಾಫಲ್ಯ ಅಡವೇಶ ॥೩೫॥

ಕುನ್ನಿಗಳ ಸ್ತುತಿಯಳಿದು ಪುಣ್ಯವಂತರ ಸ್ಮರಣೆ ।
ಧನ್ಯ ಮಾಡುವದು ರಾಮರಾಮೆನು ಶುಕಗೆ ।
ಹಣ್ಣುಗಳ ಕೊಡುಗೆ ಅಡವೇಶ ॥೩೬॥

ಸರಸ ಸಂಸ್ಕೃತ ಸೂಕ್ತಿ ಸಾರದರಿಯಾಗದಿರು ।
ವಿರಲುಕಾಲಾರಿ ಚರಿತಾರ್ಥವರಿತಾಗು ।
ಯಾರಾದರಿರಲಿ ಅಡವೇಶ ॥೩೭॥

ನಿನಗುಪಾಧಿಗಳುಂಟು ನನಗುಪಾಧಿಗಳು ಮಿತಿ ।
ಆನೆಗಂಭಾರಿ ಭಾರವಿರೆ ಮುಕುಟ ರಾ ।
ಜನಿಗೆಯುಂಟಲ್ಲ? ಅಡವೇಶ ॥೩೮॥

ಜಗವ ನಗಿಸುತಪೆನ್ನ ನಗಿಸೆಲೋ ದೇವನೆ ನಿ ।
ನಗಿದೊಪ್ಪದಿರಲು ಜಗನಗಿಸು ಮಾತ್ರದನು ।
ಒಗೆ ಕಂಡು ನಗುವೆ ಅಡವೇಶ ॥೩೯॥

ಮೂರಾಕ್ಷಿಯಿಂ ಶರಣರರ ಪಾಲಿಸಿದೆ–ನಿನ್ನ ।
ಚರಣದಿಂ ನೋಡಿ ಹರಿನಯನದುಪಯೋಗ ।
ವಿರಿಸುವೆನ್ನೊಳಗೆ ಅಡವೇಶ ॥೪೦॥

## ಮಾಯೆ–ವಿಭು

ಮಿಥ್ಯ ಮಾಯುವು ಬ್ರಹ್ಮ ಸತ್ಯ ವೇದಾಂತಿ ನುಡಿ ।
ಹತ್ತಿರುವ ಮನುಜ ಮಾಯೆ ಮರೆತಿಹರೇನು ।
ಮಾಯಾಂಶ ಕಾಯ ಅಡವೇಶ ॥೩೧॥

ಸತಿ ಬಂಧಿಸಿಹಳು ನಿಜಪತಿ ಸೂಕ್ಷ್ಮ ಬೇಡಿಯಿಂ ।
ಪತಿ ಬಲಾಢ್ಯವದು ಆರೋಪಿ ಬಂಧನದು ।
ಮಿತಿ ಕಾಲ ಮಾತ್ರ ಅಡವೇಶ ॥೩೨॥

ವಿಟಗೆ ಜನಿಸಿದ ಸುತನ ದಿಟದ ಪತಿ ಮುದ್ದಿಸುವ ।
ದಾಟ ಸತಿಕಂಡು ನಗುವಂತೆ ಪ್ರಜ್ಞರರು ।
ಮಾಟಪ್ರಿಯರಡಿಯೆ ಅಡವೇಶ ॥೩೩॥

ಲಕುಮಿ ಮೋಹವನಳಿದ ನಕಲುವೈರಾಗ್ಯರರು ।
ಏಕಾಂಕಿಯಿಂದ ಲಾಟರಿಯು ತಪ್ಪಿರಲು !
ಶೋಕ ಮಾಡಿದರು ಅಡವೇಶ ॥೩೪॥

ಲೆಕ್ಕಿಸದೆ ಗತಿಯೊಂದು ಲೆಕ್ಕಿಡಿದ ಮತಿಯೊಂದು ।
ಸಿಕ್ಕಂತೆ ಹೊಳೆದು ಕಳೆಗುಂದಿ ಕಪ್ಪಾಯ್ತು ।
ರೆಪ್ಪೆಯುಲುಕಿನೊಳು ಅಡವೇಶ ॥೩೫॥

ಲೋಲೆಮಾನಿನಿ ಗೆಜ್ಜೆ ಗಿಲ್‌ಗಿಲನೆ ಝುಂಕಾರ ।
ಕಾಲಾರಿ ಮೌನಿ–ಮಾಯಾಕ್ಷಿಯೆವೆ ಕುಣಿತ ।
ದೊಳಗೆ ಜಗವೆಲ್ಲ ಅಡವೇಶ ॥೩೬॥

ಘನ 'ಖಂ'ದಿ ತೇಲುತಿದೆ ಘನ ಬ್ರಹ್ಮದೋಳ್ ಪ್ರಕೃತಿ ।
ಹೆಣೆದ ಕೈ ಚೇಲುಪಾಧಿಮಯ ನೋಡು ನೋ ।
ಡ್ಡನ–ಹನಿಸರೊಂದೆ ಅಡವೇಶ ॥೩೭॥

ಸಹಿಸುವ ನರನಾರು ಮೋಹದಾಹತೆ ಬಹಳ ।
ಧಹಿಸುತೊಂದೊಂದು ಸೂಕ್ಷ್ಮದಿಂ ನೈಜ ನಿ ।
ರ್ಮೋಹಿಯೆಲ್ಲಿಹನು ಅಡವೇಶ ॥೩೮॥

ಹಸಿವುಣ್ಣು ಮನೆಯಾಟ ಹಸಿವಳಿದ ಬಾಲಾಟ ।
ಹಸಿವೆಯಿಂದಾಟ ಭಿನ್ನಾಟ ಜಗದಾಟ ।
ನೊಸೆದುನೋಡ್–ಮಾಟ ಅಡವೇಶ ॥೪೯॥

ನವಚಿಗುರು ನವಬೀಜ ನವಜೀವಿ ನವಭಾವಿ ।
ಸವಿಯುತಿಹನೋರ್ವ–ಕಹಿಯು ಮತ್ತೋರ್ವನೀ ।
ಸವಿದುದೇನೇನೊ ಅಡವೇಶ ॥೫೦॥

ಸೆಳವು ಸಿಕ್ಕಿದ ನಾವೆ ಕಳಕೊಂಡು ಚೇತನರ ।
ಜಲತುಂಬಿ ತಳಕೆ ಹೊಂದುತೆ ಜೀವಿಯುವಿ ।
ಶಾಲ ಮಾಯೆಯೊಳು ಅಡವೇಶ ॥೫೧॥

ಪತಿಬ್ರಹ್ಮ ಸತಿಮಾಯೆ ಪತಿಬೀಜ ಸತಿ ಪ್ರಕೃತಿ ।
ಪತಿಯೋರ್ವ ಸತಿಯಳಿಂದುದಯದನೇಕಂ ।
ಸತತ ಗತಿಯಂತ್ರ ಅಡವೇಶ ॥೫೨॥

ದೂರದಾ ಘನಹನಿಯು ಬೋರನೇ ಬರುತಿಹುದೊ ।
ಅರೆಪೂರ್ಣ ಕುಸುರಿ ನೋಡುವಳು ಹಿಡಿಯುವಳು ।
ಸರನೆ ಮುಡಿಯುವಳು ಅಡವೇಶ ॥೫೩॥

ಹೊರಗಿಲ್ಲ ಒಳಗಿಲ್ಲ ಗರಳಕಂಠದೊಳಿಹುದು ।
ವಿರದ್ವೈತಿಯನಿರ್ವಚನೀಯ ಮಾಯಾ ।
ತಿರುಳರ್ಥ ತರಳ ಅಡವೇಶ ॥೫೪॥

ದಾಹವಿಂದೋಟ ಕೆಲ ದಾಹದಿಂ ಮರಣ ಕೆಲ ।
ದಾಹದಿಂ ಚರಣ ಹಿಡಿಯುತಿರೆ ಮುಡಿಯುತಿರೆ ।
ಬಹು ಪಾತ್ರ ಪಯಣ ಅಡವೇಶ ॥೫೫॥

ಮನ ತೊಳೆಯದಾ ನರನ ಹೆಣತೊಳೆದರೇನಾಯ್ತು ।
ಹನಿಗೆ ನೆನೆಯದಿಹ ಶಿಲೆಯ ನದಿಯೊಳಗಿಡಲು ।
ನೆನೆಯಬಹುದೇನು ಅಡವೇಶ ॥೫೬॥

ಜ್ಞಾನದಾಹವೆ ದಾಹ ಮನದ ನೇಹವೆ ನೇಹ ।
ಮಾನವತಿ ಮೌನಿ ಮಾನನಿಧಿಯೇ ನಿಧಿಯು ।
ಏನಿದೆಯೊ ಅದುವೆ ಅಡವೇಶ ||೪೭||

ಜಗವೆಂದರೇನೆನದು ಬೀಗರೂಟೆಂತಯ್ಯ ।
ಜಗವೊಂದು ವೃಕ್ಷ ಭೋಗರೋಗವು ಯೋಗ ।
ಸಾಗಿಹುದ ಟೊಂಗೆ ಅಡವೇಶ ||೪೮||

ಚಕಿತ ವಸ್ತುವಿಗೆಲ್ಲ ವೇಕನಿರ್ಣಯವಯ್ಯ ।
ಅಕೋ ನೋಡು ನುಡಿಯುಖಂಡಿತ–ಖಂಡಿತಿದು ।
ಯೇಕ ನಿಜವೆಂದು ಅಡವೇಶ ||೪೯||

ಈಶ್ವರೀ ಶಕ್ತಿಯದು ಈಶ್ವರಾಧೀನೆಲ್ಲ ।
ವಿಶ್ವದೈಶ್ವರ್ಯ ಕ್ಷಣಕ್ಷಣಕೆ ನಶ್ವರತೆ ।
ಯಶ್ವದೋಟೆಂತೆ ಅಡವೇಶ ||೫೦||

ಬೇಡೆಂದರೀ ಮಿಂಚು ಜೋಡಿಸಿದ ಜಗದೀಶ ।
ನೋಡು ತಿರುನೀಲಕಂಠರತ್ಯರ್ಥ ನವ ।
ಮೊಡಲಿನಿಂ ಸರಸ ಅಡವೇಶ ||೫೧||

ಮೃತ್ಯು ವಿಷ ಕುಡಿದರೂ ಮೃತ್ಯುಂಜಯನೆನಿಸಿದ ।
ಮುತ್ತಿರುವ ಮಾಯದೊಳಗಿರೆ ಚಿರಂಜೀವ ।
ತತ್ವದ್ಹತ್ತರಿರು ಅಡವೇಶ ||೫೨||

ಸತಿ ಮೋಹದೊಳು ಗೂಢ ಸತಿಯಂತ್ಯದೊಳು ಕ್ರೋಧ ।
ಸತೀಶನೊಳಿರಲು ಮಾನವರ ಪಾಡೇನು ।
ಸುತ್ತಿದಿವರನ್ನು ಅಡವೇಶ ||೫೩||

ಆರಭಕ್ತಿಗೆ ಶಿವನು ವಿರಚಿಸಿದ ವಿಸ್ಮಯವ ।
ಪರಿಹಾರಿಯಾರು ? ನರಳುತನ ಕೊರಗುತನ ।
ಮರಣಾಗುತನಕ ಅಡವೇಶ ||೫೪||

ಸುಪ್ತಿಯೊಳು ಜಗಲುಪ್ತ ಸಪ್ತಭೂಮಿಕೆ ಗುಪ್ತ ।
ಸುಪ್ತಿ ಜೀವನದ ಸುಪ್ತಳಿದು ವಿಚಾರಿಸೆ ।
ಪ್ರಾಪ್ತ ಪ್ರಜ್ಞಾನ ಅಡವೇಶ ॥೫೫॥

ಕೂಸುಗನ್ನಡಿವೆದುರು ಜೇಸರಡೆ ಚಿನ್ನಾಟ ।
ಸೂಸುತಾನಂದ ಪರಬೊಮ್ಮ ಸ್ಥಿತಿಯಾಟ ।
ಬಸಿರು ಶಿಶುಗೆಲ್ಲಿ ಅಡವೇಶ ॥೫೬॥

ಚಿತ್ರವೀ ಮಾಯೆಯೋ ಚಿತ್ರಕಾಧಾರದು 'ಕಂ'
ಚಿತ್ರಳಿಯೆ ನಿಜದು ಪಟವಿಲಕ್ಷಣ ವಿಭುವು ।
ನಿತ್ಯ ನಿಶ್ಚಯಿಸು ಅಡವೇಶ ॥೫೭॥

ಲೌಕಿಕಾಧ್ಯಾತ್ಮ

ನೆಗಡಿಯಾದವನ ಕರ ಮೂಗು ಮೇಲಿರುವಂತೆ ।
ಭೋಗಿ ಕೈ ಪಯೋಧರೆಡೆ ಸೂಚಿಸುತೆ ಶಿವ ।
ಯೋಗಿಕರ ಕೃಪೆಯು ಆಡವೇಶ ॥೫೮॥

ಪ್ರಾರ್ಥನೀಯತೆ ಭೋಗದರ್ಥಿಯನೆ ಲೌಕಿಕ ಯ ।
ತಾರ್ಥ ಜಿಜ್ಞಾಸೆ ಗತಿಯು ಕೊನೆ ರೂಪ ಪರ ।
ಮಾರ್ಥವೆನಬೇಕು ಅಡವೇಶ ॥೫೯॥

ಪರಮಾರ್ಥ ಪ್ರಪಂಚವಿರೆರಡು ಮುಖ ಜಂಬುಫಲ ।
ವೆರಡಕ್ಕುಯದುವೆಯಾಧಾರವಾದಂತೆ
ಮರೆಯರಿವಿಗೊಂದು ಅಡವೇಶ ॥೬೦॥

ಲೌಕಿಕಾಧ್ಯಾತ್ಮಗಳು ಲೋಕದೊಳು ಪ್ರತ್ಯಕ್ಷ ।
ಚಕ್ಕಾಟ ಒಂದು ಜೊಕ್ಕಾಟ ಮುಂದಿನದು ।
ತಿಕ್ಕಾಟ ಲೋಕ ಅಡವೇಶ ॥೬೧॥

ಸ್ವಾರ್ಥನಳಿದವರಿಲ್ಲ ಪಾರ್ಥಸಮರಿಲ್ಲ ಪರ ।
ಮಾರ್ಥವೆಲ್ಲರರ ಸೊತ್ತಲ್ಲ ಮಿಂಡೆಗೆ ಯ ।
ಥಾರ್ಥ ಮತಿಯಿಲ್ಲ ಅಡವೇಶ ॥೬೨॥

## ಸತ್ಪುರುಷ

ಬಂದ ಭಿಕ್ಷೆಯನೆಲ್ಲ ಹೊಂದಿಸುತ ವಿಷಯದೆಡೆ ।
ವೃಂದೆಯಾಂಚಲದಿ ಸುಖಿಸುವಗೆ ಸತ್ಪುರುಷ ।
ರೆಂದು ಘೋಷಿಸುದೆ ? ಅಡವೇಶ ॥೬೩॥

ಸ್ವಧರ್ಮ ಹೇತುಗತ ಸಾಧಿಸುತ ಬೋಧಿಸುತ ।
ನಾದರಿಸಿ ಸಾಂಪ್ರದಾಯಗಳ ಸಂಪನ್ನಿ ।
ವೇದ ಸತ್ಪುರುಷ ಅಡವೇಶ ॥೬೪॥

ಕುತ್ಸಿತಗಳು ಕಳೆಯುತಲಿ ಹೊತ್ತನರಿಸುತ ಜಗಕೆ ।
ಹೊತ್ತು ಅಪವಾದ ಸತ್ಫಲಾಲಂಕೃತರೆ ।
ಸತ್ಪುರುಷರೆನ್ನಿ ಅಡವೇಶ ॥೬೫॥

ಅವಸ್ಥೆಗಳಾಸಾಕ್ಷಿ ಸವಿರಜೆಯ ವೃತ್ತಿಯಲಿ ।
ದವಯವದ ಲಕ್ಷ್ಯ ಯುವತಿ ವೃದ್ಧತೆವಿರದ ।
ಸವಿಗಾತಿ ಮುಕ್ತ ಅಡವೇಶ ॥೬೬॥

ಒಮ್ಮತದ ತಾತ್ವಿಕರುವೆಮ್ಮ–ವೆಮ್ಮಯವಿಂತು ।
ತಮ್ಮೊಳಗೆವಿರಲು ಸಮದರ್ಶನೆಂಥದಿದು ।
ಸುಮ್ಮ ಸತ್ಪುರುಷ ಅಡವೇಶ ॥೬೭॥

ಮಿಥ್ಯವೆನ್ನುವರೆಲ್ಲ ವಿತ್ತ ಸಂಗ್ರಹಿಸುತಿರೆ ।
ರೀತ್ಯಾನುಸಾರ ನುಡಿಯಂತೆ ನಡೆಯುವಾ ।
ಸತ್ಪುರುಷರೆತ್ತ ? ಅಡವೇಶ ॥೬೮॥

## ಸೇವೆ

ಧನಭಾವ ಮೋಹದಲಿ ತನುಸೇವೆವೇಶ್ಯೆಯಳ ।
ದನಿತು ಲಕ್ಷಿರಲು ಮುನಿಸೇವೆಯಾ ಸಂಧಿ ।
ತನಿಗಂಧ ಬಹುದೆ ಅಡವೇಶ ॥೬೯॥

ವರಕೃತಿಗೆ ನಾಳೆನುವ ವರಕುರಿಗೇ ನುಡಿಯು ।
ವಿರುವಸುತ ಮರಣವಾಗಲ್ಕೆ ಹುಗಿಯಲಾ ।
ಮರುದಿನೆನ್ನುವರೆ ಅಡವೇಶ ॥೬೦॥

ಪೃಚ್ಛಮುಖವಿರಲೇನು ಸ್ವಚ್ಛಮಾಸ್ಯತೆ ಖ್ಯಾತ
ಸಚ್ಚರಿತ ದೇವವಿದು ಕಾರಣದು ಭಕ್ತಿ ।
ಮೆಚ್ಚು ರಾಂ ಸೇವೆ ಅಡವೇಶ ॥೬೧॥

ಕಾಮವೆಲ್ಲರಿಗುಂಟು ಸೋಮನೆಲ್ಲರಿಗಿಹನೆ ।
ನೇಮಗಳೆಣಿಕೆಯು ಬಲು ಕಷ್ಟ ಕಷ್ಟವೈ ।
ಯಾಪರಿತು ಸೇವೆ ಅಡವೇಶ ॥೬೨॥

ಯತಿಯಾಶ್ರಮಿಯಾದಂಗೆ ಸುತಬಂಧು ಬಾಂಧವ್ಯ ।
ದತಿದೂರವಹುದು ಕರವಿಡಿದದಬಲೆಗಾ ।
ಪತಿಸೇವೆಯಹುದು ಅಡವೇಶ ॥೬೩॥

ಕೃಪಾ-ಶಕ್ತಿ

ಕೃತಿಕಾವ್ಯ ಕಲೆಕುಸುರು ಶ್ರುತಿಬೋಧ ಸತತ ಕೃತಿ ।
ಯತಿಬೋಧೆಯಾಜ್ಞೆ ಸಾಹಸತೆ ಸಂಹಾರೆ ।
ಶಕ್ತಿ ಸೂಕ್ಷ್ಮದಲಿ ಅಡವೇಶ ॥೬೪॥

ಜಡ ಕಾಷ್ಠ ಶಿಲೆಪವನ ಜಡಬೀಜ ಗಡಣ ಭರ ।
ಡೋಡುವಾ ಜಲದಿಯಜ್ಞ ಸುಜ್ಞಾನಿಯೋಳು ।
ಗೂಢವಿದು ತಿಳಿಯೊ ಅಡವೇಶ ॥೬೫॥

ಶಕ್ತಿಮತ ಖಂಡಿಸುವ ವ್ಯಕ್ತಿಗಳ ಗತಿಯೊಳಗೆ ।
ವ್ಯಕ್ತವಾಗಿಹುದ ಶಕ್ತ್ಯಂಶ ವಿವಿಧ ದಿಟ ।
ಸೂಕ್ತಿ ಕೃತಿ ಕಂಡ ಅಡವೇಶ ॥೬೬॥

ಬೆಡಗುದಾರ್ಶನಿಕರು ಕೊಡುತ ಕೆಲನಾಮಗಳ ।
ಕಡೆಗೆ ಬೇಸತ್ತು ವಿಶ್ರಾಂತಿ ಪಡೆವಂತೆ ।
ಪಡೆಯೊರಸವಿಲ್ಲಿ ಅಡವೇಶ ॥೬೭॥

ಪರಮಾತ್ಮನೊಳರೆ ಭಾಗನಿರುವಂತೆ ಪಾಮರರೊಳು ।
ಕರಣೇಂದ್ರಿಯೊಳಗೆ ಪರಿಪೂರ್ಣ ಮಹಪೂರ ।
ಹರಿದು ಕೊರನೋಟ ಆಡವೇಶ ॥೭೮॥

ವರ ಕೃಪಾಶಕ್ತಿಯದು ಹೊರನೇತ್ರಗೆಂತಳವು ।
ಪೂರ್ವದಹಿಸಿರುವ ರಥದಿನರ-ಬದುಕಿರಲು ।
ಕಾರಣಿದರ್ಕೇನು ಆಡವೇಶ ॥೭೯॥

ಗುರು

ಪಾರ ಹರ ಗುರುವೆಂಬ ದೀಪದುಪಮೆಯುವಿರಲು ।
ಕಾಪಾರಿ ಗುರುವು ಪಾಪಕೃತಿಯೊಳಿರಲು ।
ಪಾಪಾರಿ ಯಾರು ಆಡವೇಶ ॥೮೦॥

ಹೊಗಳಲಾ ಕೃಪೆನೋಟ ಸಗುಣ ಗುರುವಿಂಗುಚಿತೆ ।
ಸುಗುಣಿ ವಧು ಚಿನ್ನ ತಾಂಕಂಡು ವರಿಸುವದು ।
ಬಗೆ ಶಿಷ್ಯವರಣ ಆಡವೇಶ ॥೮೧॥

ಬಹುರಮ್ಯ ಜೋಹದಲಿ ಮಹಗುರುತ್ವಂಟೇನು ।
ದಹರ ಪರಿಪೂರ್ಣ ಗಹನ ಲಕ್ಷಣ ಪೂರ್ಣ ।
ಸಹಜವಿರೆ ಸ್ವರ್ಣ ಆಡವೇಶ ॥೮೨॥

ಮಂತ್ರದರ್ಥದಿವಿರದೆ ತಾಂತ್ರಿಕದ ಕೃತಿಯೊಳಗೆ ।
ಮಾಂತ್ರಿಕದ ಮಾರ್ಗಹಿಡಿದ ಹಾವಾಡಿಗರು ।
ಶಾಂತ ಮೂರ್ತಿಗಳೆ ? ಆಡವೇಶ ॥೮೩॥

ಗುರು ಶಿಷ್ಯ ಬಾಂಧವ್ಯ ಸರಿ ದ್ವಿದಲ ಧಾನ್ಯಂತೆ ।
ವಿರುಬೀಜ ಭಾಗವಾಗಲ್ಕೆ ಬೆಳೆಯದಾ ।
ಸರಿವೊಳಕೆಯಾಗಿ ಆಡವೇಶ ॥೮೪॥

ಹಕ್ಕುಗಳು ನಿಜಮನದಿ ಕಕ್ಕುಲತೆಯಲ್ಲಿಹವು ।
ಒಕ್ಕರದಿಯಲ್ಲ ಮತಮರಿಯ ನಿಯಮಿಸಲು ।
ತಕ್ಕ ಗುರು ಬೇಕು ಆಡವೇಶ ॥೮೫॥

ಚಾಡಿಲಕ್ಷದ ಹಿರಿಯ ನಾಡೆ ಜಾರೆಯ ಕುಲವು ।
ಮೋಡಿ ಮಾಟದದ ಗುರುವಿರ್ದ ಪುರಹಾಳು ।
ಬಾಡಿದಾ ಬೆಳೆಯು ಆಡವೇಶ ॥೮೬॥

ಜಲದಿ ಬೆಳೆದಾ ಬೆಂಡ ಜಲದಿ ಮುಳುಗುವ ನರನ ।
ಸಲೆ ಕಾಯುವಂತೆ ಗುರು ಮೂರ್ತಿ ಜೀವಿಗಳ ।
ಕಾಯುವನು ಸತ್ಯ ಅಡವೇಶ ॥೮೭॥

ಪಾಲಕುಚ ತುಂಬಲಾ ಬಾಲನಪ್ಪುತೆ ಮಾತೆ ।
ಹಾಲುಣಿಸುವಂತೆ ಶೀಲ ಶಿಶು ಶಿಷ್ಯಂಗೆ ।
ಹಾಲು ಗುರುವಿಂದ ಅಡವೇಶ ॥೮೮॥

ಗರ್ಭದಾ ಶಿಶು ಉಲುಕು ಗರ್ಭಿಣಿಗೆ ಗೋಚರವು ।
ಗರ್ಭಪಿತಗಲ್ಲವಿದು ಸಿದ್ಧ ನಿಧಿಯು ।
ಗರ್ಭದಂಜನಕೆ ಅಡವೇಶ ॥೮೯॥

ಅಧರ ಮಧುಯುದಯಅಣ ಹೃದಯಸುಧೆ ಹದಪೂರ್ಣ ।
ನಾದ ಗುರುವರಣ ರಸಿತೆರಸದೈಕ್ಯದಲಿ ।
ಮದನಾಂಗ ಮರೆವು ಅಡವೇಶ ॥೯೦॥

ಗುರುನೋಟ ಮಂದಸ್ಮಿತ ಗರಿಕೂಸು ಮುಗುಳುನಗೆ ।
ಯರಿಯುದಕೆಯನೀರ್ವಚನೀಯ ಕಿಂತುಸುಖ ।
ನೆರಳು ನೆರೆಬಣ್ಣ ಅಡವೇಶ ॥೯೧॥

ಮಾತೃ ಮಾಡಿದ ಮಥನಮೋತು ಬಂದಿಹಬೆಣ್ಣೆ ।
ಪ್ರೀತಿಸುತ ಶಾಮ ತೃಪ್ತಿತೆರ ವರಶಿಷ್ಯ ।
ಮಾತೃ ಗುರುದಿಂದ ಅಡವೇಶ ॥೯೨॥

ಘನೀಭೂತ ಗುರು ಘನಕೆ ತನಿಶಿಷ್ಯನಾ ಪವನ ।
ವಿನಯದನಿ ಬೀಸೆ ಗುಡುಗು ಮಿಂಚಿನ ಬಳ್ಳಿ ।
ಝುನನಸುಮ ಕೊಡುಗೆ ಅಡವೇಶ ॥೯೩॥

ಪಾರ್ಥ ಗುರು ದ್ರೋಣ–ಪರಮಾರ್ಥ ಗುರು ಬೇಡ ಯ ।
ಥಾರ್ಥ ವಿಜಯದಾ ಹೆಬ್ಬೆರಡು ಬೇಡುವಾ ।
ಸ್ವಾರ್ಥಿ ಗುರು ಬೇಡ ಅಡವೇಶ ॥೯೪॥

ಭರಿತ ಜಲ ಹರಿಯುತಿರೆ ನಿರುಬೊಗಸೆ ಜಲಸಾಕು ।
ಗಿರಿಸಾಮ್ಯ ಗ್ರಂಥ ಪಠಣವಿರೆ ಪಂಡಿತಗೆ ।
ಗುರು ಮಂತ್ರ ಬೇಕು ಅಡವೇಶ ॥೯೫॥

ಸ್ವರ್ಣದಾಭರಣಗಳು ಮುರಿದು ಹೋಗುವವೊಮ್ಮೆ ।
ಗುರುಮಂತ್ರ ಬೋಧದಾಭರಣ ಮುರಿಯದದು ।
ಪರಮವಿರುತಿರಲು ಅಡವೇಶ ॥೯೬॥

ಗುರುವು ಕಟ್ಟಿದ ತಾಳಿ ವಿರುಭೂತಿ ಕಂಕಣವು ।
ಹರಿದ್ರ ಶುಭಗಂಧದಾತ್ಮ ಗರ್ಭದಿವಿಟ್ಟ ।
ವರ ಬೀಜ ಚಿರವು ಅಡವೇಶ ॥೯೭॥

ದಿಕ್ಸೂಚನೆಯಂತ್ರ ಚೊಕ್ಕದುಪಯುಕ್ತತೆಯು ।
ದಿಕ್ಕೆಟ್ಟ ನರಗೆ ಸಮುಭ್ರಾಂತರಿಂಗೆ ಮತಿ ।
ಯುಕ್ತ ಮತ ಮಂತ್ರ ಅಡವೇಶ ॥೯೮॥

ಹುಚ್ಚರಾಸ್ಪತ್ರೆ ಜಗದಚ್ಚ ವೈದ್ಯನು ಗುರುವು ।
ನಿಚ್ಚಳದ ಬೋಧದೌಷಧವ ಕೊಡುತವನು ।
ಹುಚ್ಚು ಬಿಡಿಸುವನು ಅಡವೇಶ ॥೯೯॥

ಚನ್ನ ಗುರು ಕೃಪೆವಿರದೆ ಧನ್ಯನಾದೆಂಬ ನುಡಿ ।
ತನ್ನ ತಾನೆಯಾರತಿಯ ಮಾಡಿಕೊಂಬಂತೆ ।
ವೆನ್ನು ಜಗದೊಳಗೆ ಅಡವೇಶ ॥೧೦೦॥

ಖಿನ್ನ ಬಲರಂಜಿಕೆಯೆ ತನ್ನ ಶಿಷ್ಯನ ಮತಕೆ ।
ಮನ್ನಿಸಿ ಬರದಿರೆ ನುಡಿಗಂಜಿ ಬಿಟ್ಟಂತೆ ।
ತನ್ನ ಸತಿಕೂಟ ಅಡವೇಶ ॥೧೦೧॥

ವರಪುತ್ರರಿರಲೇನು ಗುರುಪುತ್ರರಾಗ್‌ಬೇಕು ।
ಪರಮ ಘನ ಶಾಮ ದೇವನಿರೆ ಸಾಂದೀಪ ।
ಗುರು ಪಡೆದ ಪಥಿಕ ಅಡವೇಶ ॥೧೦೨॥

## ಯಾತ್ರೆ

ಗುರುದೇವ ತೀರ್ಥಗಳ ಯಾತ್ರೆ ಸರ್ವೆಡೆ ಖ್ಯಾತ ।
ಗುರುಯಾತ್ರೆ ಶ್ಲಾಘ್ಯ ಶಿವ-ರುದ್ರಭೂಯಾತ್ರೆ ।
ಬರಿದಾದ ಪಾತ್ರೆ ಅಡವೇಶ ॥೧೦೩॥

ಅರ್ಥವುಳ್ಳವಗೆಲ್ಲ ತೀರ್ಥ ಯಾತ್ರೆಗಳುಂಟು ।
ಅರ್ಥರಹಿತಂಗೆ ಯಾತ್ರೆವೆಂತುಂಟು ಶಿವ ।
ಸೂತ್ರ ಸಾಕೆನಗೆ ಅಡವೇಶ ॥೧೦೪॥

ಇಚ್ಛೆಯದ ಯಾತ್ರೆಗಳು ಹುಚ್ಚುತೊಂದೊಂದಾಸೆ ।
ಹೆಚ್ಚಳದ ಯಾತ್ರೆ ಗುರುಯಾತ್ರೆಗೊಪ್ಪುವಾ ।
ಅಚ್ಚಪುರುಷಾರು ಅಡವೇಶ ॥೧೦೫॥

## ಶಿಷ್ಯ

ಗಂಡ ಹೆಂಡರ ಜಗಳ ಚಂಡುಪುಟಿದಂತಿರಲು ।
ಗಂಡನವ ಪುಸಿಯೆ ವಿಂತು ಗುರುಶಿಷ್ಯಳೊರಿರೆ ।
ಗಂಡ ಗುರು ಪುಸಿಯೆ ಅಡವೇಶ ॥೧೦೬॥

ಧನ್ಯಗುರು ಶುಭನಾಮ ಚನ್ನದಿಂ ನುಡಿಯದವ ।
ಕುನ್ನಿ ವಂಶಜನೊವೆನ್ನದಿರೆ ವೇಶಿಯುಳ ।
ಮನ್ಯ ಸುತನೆನ್ನಿ ಅಡವೇಶ ॥೧೦೭॥

ಗುರುಪುತ್ರರೆನ್ನುತಲಿ ಸರದ ಕುಟಿಲತೆ ಕಾರ್ಯ ।
ಸುರದ ಲಲನಾಂಗ ಲೋಲುಪರಗಿಂತ ಗುಣಿ ।
ವರ ಭಕ್ತಲೇಸು ಅಡವೇಶ ॥೧೦೮॥

ಮಂಡಲೇಶನ ಸುಡಿಯೆ ಯುಂಡು ಭಂಡಾಟಲ್ಲ ।
ಗಂಡು ತತ್ವಾರ್ಥ ತಿಳಿಯಲಾರದ ಜೀವಿ ।
ಮುಂಡೆಯಾದಂತೆ ಅಡವೇಶ ॥೧೦೯॥

ತನು ಮನಾರ್ಪಣ ಸತಿರೆದಿನಿಯನಡಿ ಮಾತುಕತೆ ।
ಯನಿತು ಮರ್ಯಾದೆ ನಡೆಸಂತೆ ಶಿಷ್ಯಗುರು ।
ವಿನಡಿಯೊಡನಾಟ ಅಡವೇಶ ॥೧೧೦॥

ನಯನ ಕಣಕುಡಿಯಲ್ಕೆ ಮಯೂರತ್ಕಟ ಭಾವ ।
ಮಯು ಶಿಷ್ಯನಿರುತ ಗುರುರಸವ ಗ್ರಹಿಸಲ್ಕೆ ।
ಶ್ರೀಯಗರ್ಭ ಅಡವೇಶ ॥೧೧೧॥

ಗುರುಪುತ್ರರೇ ನಿಮಗೆ ಗುರಭೇದಯುಚಿತಲ್ಲ ।
ಪರಿಯಿವರಕಿಂತ ಕರಿಕಾಗೆ ಕುರಿ ಲೇಸು ।
ಗುರುವಿರುವುದೊಂದು ಅಡವೇಶ ॥೧೧೨॥

ಪತಿಮೃತ್ಯು ಸಂತರದಿ ಮುತ್ತೈದಿತನದಳಿವು ।
ಮತಿಗುರುವ ಪಡೆದ ಶರಣ ಗುರು ಪುತ್ರ ಚಿರ ।
ಮುತ್ತೈದಿಯುಹರು ಅಡವೇಶ ॥೧೧೩॥

ಶೀಲವರ ಗುರು ಶಿಷ್ಯ ಹಾಲು ಹಾಲಿನ ಸಂಧಿ ।
ಬಾಳು ಬಂಗಾರ ಇಕ್ಷುರಸ–ಲಿಂಬುರಸ ।
ಸುಳಿದು ಮಧುರಂತೆ ಅಡವೇಶ ॥೧೧೪॥

ವಿಧಿವರಣದಿಂ ಬಂದ ವಧುವು ಸತಿಯಾಗುತಿರೆ ।
ವಿಧಿರಹಿತಳೆಂತು ಗುರುಕೃಪೆಯ ತರಳ ಚಿರ ।
ವಿದನರಿಯ ದುರುಳ ಅಡವೇಶ ॥೧೧೫॥

ಸೀಸ–ಸುರೆ ಲಕ್ಷದಾ ಶಿಷ್ಯರಿರೆಯುಚಿತಲ್ಲ ।
ಸೂಸು ಸುವಿಚಾರಿಯೋರ್ಪನಿರೆಯವನಿಂದ ।
ಸೂಸಿ ಗುರುಗಂಧ ಅಡವೇಶ ॥೧೧೬॥

ನಿರ್ಮಲತೆ ಗುರುಪುತ್ರ ಗುರುಪುತ್ರಿಗಳನು ಚಿರ ।
ಚಿರಪುತ್ರ ಮತ್ತೆ ಚಿರಪುತ್ರಿ ತಿಳಿಯುವದು ।
ಪರಿಸೂತ್ರ ಪ್ರಿಯುರು ಅಡವೇಶ ॥೧೧೭॥

ಬೇನೆ ತಿನ್ನುವ ನಾರಿಯನಿತು ನಾಚುದು ಕೇಡು ।
ಘನ ಗುರುವಿನಡಿಯೆ ವರನು ನಾಚುದು ಕೇಡು ।
ದನುರಾಗವೇನು ಅಡವೇಶ ॥೧೧೮॥

ಹಾಲು ಕೆಚ್ಚಲದೊಳಗಿರಲು ಕರುವಿರಲು ಶೋಭೆ ।
ಲೋಲೆ ಕುಚಪಾಲು ಕುಡಿವ ಶಿಶುವಿರದಿರಲು ।
ಹಾಲು ಬೆಲೆಯೇನು ಅಡವೇಶ ॥೧೧೯॥

ಮುದಿತೆ ಹೃದಯುದ ನಿತ್ಯ ಮದಪುರುಷ ಮದನಾಟ ।
ಸದರ ನಡೆವಂತೆ ಪದುಳ ಶಿಷ್ಯನ ಹೃದಯೆ ।
ಮದನ ಗುರು ಬೇಟೆ ಅಡವೇಶ ॥೧೨೦॥

ಗುರು ಮಂತ್ರದೊಳು ಶಿಷ್ಯನುರೆ ನಂಬಿಗಿಡಬೇಕು ।
ಪರೀಕ್ಷಿಸೆ ಕುಂತಿ ರವಿಸಮಾಗಮೆ–ಕನ್ಯೆ ।
ವಿರುವಾಗ್ಗೆ ಜನನಿ ಅಡವೇಶ ॥೧೨೧॥

## ಗುರುದ್ರೋಹ

ಅಪ್ಪನಡವೇಶನಿಗೆ ಅಪ್ಪೆನದ–ದ್ರೋಹಿ ಜನ ।
ರೊಪ್ಪು ಸತಿಯನ್ಯ ಜಾರನಪ್ಪಿದಡೇನು ।
ತಪ್ಪೆನ್ನರೆಂತು ಅಡವೇಶ ॥೧೨೨॥

ಗುರು ಕರುಣೆಯಿಂದೆಲ್ಲ ಸಿರಿವಿದ್ಯಗಳಿಸುತಲಿ ।
ಯರಿಯಾಗಿ ಮುಂದೆ ಹೃದಯಕಾಘಾತಕರ ।
ದುರು ಜನರ ಕಂಡ ಅಡವೇಶ ॥೧೨೩॥

ಗುರು ದ್ರೋಹಿಯಾದ–ಗುರುಕರವಿಡಿದ ಕುಲವೆಲ್ಲ!।
ಗುರು ದ್ರೋಹಿವೆನ್ನಿ ಇಂಥ ಗುರು ಪುಣ್ಯತಿಥಿ !
ಸರಿಯೆನ್ನ ಬಹುದೆ ಅಡವೇಶ ॥೧೨೪॥

ಗುರಿ ದುರಿತಜೀವಿಂಗೆ ಕರಮು ಪ್ರಾಯಶ್ಚಿತ್ತ ।
ಗುರು ಚರಣದಡಿಯೆ ಕ್ಷಮೆಯಾಚನೆಯೊಂದೆ ।
ಇರುದೊಂದು ಮಾರ್ಗ ಅಡವೇಶ ॥೧೨೫॥

ವರ ಮುಕುತಿ ನಿಜವಾಗಿ ಗುರುದ್ರೋಹಿಗಿಲ್ಲೆಂಬ ।
ಇರುವ ಶಿವಗೀತೆ ನುಡಿಯು–'ಸ ನ ಮುಚ್ಯೇತ"- ।
ಇರುದಿಂತು ನೋಡು ಅಡವೇಶ ॥೧೨೬॥

ಗುರುದ್ರೋಹಿಯಾದವನು ಗುರುಪೀಠಕೊಪ್ಪುವನೆ ।
ಶಸ್ತ್ರಕ್ರಿಯೆ ಪಡೆದ ನಾರಿಗರ್ಭಿಣಿಯೆಂತು ।
ದುರುಳ ಗುರುವಲ್ಲ ಅಡವೇಶ ॥೧೨೭॥

ನನ್ನಣ್ಣನೆನ್ನುತಲಿ ಉಣ್ಣಿಸುತ ವಿಷಹಾಲು ।
ಹೊನ್ನದಾಸೆಯಲಿ–ಗುರುದ್ರೋಹಿಗಳ ಕಂಡು ।
ಮನ್ಯ ಮನದೂರ ಅಡವೇಶ ॥೧೨೮॥

## ಮಠ–ಮಠಾಧಿಕಾರ

ಜನ್ನದಾಶ್ರಮವೆಂದು ದನ್ಯರಾಗುವ ರುಚಿಯೆ ।
ಮನ್ನಿಸುತ ಬರಲು ಕಲುಷ ತುಂಬಿರಲಲ್ಲಿ ।
ಧನ್ಯ ಮಠವೆತ್ತ ಅಡವೇಶ ॥೧೨೯॥

ಮಠದಿಂದ ಮಠವಲ್ಲ ಮಠಾಧಿಪತಿಯಿಂದದು ।
ಮಠವೆನಿಸಿಕೊಳ್ಳ್ಗ ಸಮಾಜ ಸುಧಾರಣೆಗೆ ।
ಮೇಟಿಯಾಗಿಹನು ಅಡವೇಶ ॥೧೩೦॥

ಒರೆಯೊಳಗೆ ಖಡುಗೊಂದು ಎರಡೆಂತು ಹಿಡಿಸುವವು ।
ಪರಿಯಂತೆ ಮಠಕೆ ಯತಿಯು, ಗುರು, ಓರ್ವನಿರೆ ।
ಎರಡೆನುವ ಮೂರ್ಖ ಅಡವೇಶ ॥೧೩೧॥

ಸತಿಗೋರ್ವ ಪತಿನುಡಿಯು ಯತಿಯೋರ್ವನೆ ಮಠಕೆ ।
ಪತಿಯೈದು ವರಣ ಸತಿಗಂತು ಕ್ಲೇಶವಿರೆ ।
ಪತಿಯೋರ್ವರೆಂತು ಅಡವೇಶ ॥೧೩೨॥

ವಧು ಚಿಸ್ನವರಕಂಡು ಒಡವಿತಾನೊಪ್ಪು ಪರಿ ।
ಪದ ಮರಿಯ ಬಿಡಲು ವಿರುಮತಾಧೀಶನಿಗೆ ।
ಯಧಿಕಾರವುಂಟು ಅಡವೇಶ ॥೧೩೩॥

ದತ್ತಕವ ಕೊಡಲಿಕ್ಕೆ ಹತ್ತುಶತರಿರ್ದೇನು ।
ದತ್ತಾಧಿಕಾರಿಗೋರ್ವನಾವಶ್ಯಕತೆ ।
ಯಿತ್ತ ಗುರು–ಮರಿಗೆ ಅಡವೇಶ ॥೧೩೪॥

ಶ್ರೇಷ್ಠ ಮರಿ ಲಕ್ಷಣವ ಸ್ಪಷ್ಟರಿವ ಗುರುವ್ಪೋರ್ವ ।
ಬ್ರಷ್ಠ ಮೂರ್ಖರರು ತಿಳಿಯರರು ರುಚಿಯರಿವು ।
ಸ್ಪಷ್ಟನಾಲಿಗೆಗೆ ಅಡವೇಶ ॥೧೩೫॥

ಗಡ್ಡ ಕೇಶಗಳಿರಲು ದೊಡ್ಡಸ್ವಾಮಿಗಳೇನು ।
ಗೊಡ್ಡೆಮ್ಮೆಯಿಂದ ಹಾಲುಕರೆಯಲು ಕುಳಿತ ।
ದಡ್ಡರರು ಶ್ರೇಷ್ಠ ಅಡವೇಶ ॥೧೩೬॥

ಈರ್ವ ಮರಿ ವಿರಲೆನುವ ಗರ್ವಿಧೂರ್ತರು ಕೆಲ ।
ಸವಿನಯದ ವಧುಗೆ ರೀರ್ವ ವರ ನಿಶ್ಚಯುವ ।
ಕಾರ್ಯ ಬಿಡರೆಂದು ಅಡವೇಶ ॥೧೩೭॥

ದುರುಳರರ ಮಾತಿನಿಂ ಸರಿವೆನುತ ಪಂಡಿತರರು ।
ಕುರಿ ಕತ್ತೆಮರಿಯ ಬಿಡಲವರು ಒಪ್ಪುತಿರೆ ।
ಜರಿಯುವವರಾರು ಅಡವೇಶ ॥೧೩೮॥

ಹೋರಿ ಗಾಡಿಯು ಜೀವಿ ಮೂರುವಿರೆ ರಭಸೋಟ ।
ಚಾರುಮತಿ ನೀತಿ ಧಾರ್ಮಿಕತೆ ಗುರುಮೂರ್ತಿ ।
ಮಾರಹರಹರನು ಅಡವೇಶ ॥೧೩೯॥

ತಾನಾಗಬಹುದೇನು ಮಾನ್ಯಮಠದಧಿಕಾರಿ ।
ದಾನಿಯೋರ್ವನಿರೆ ಬೇಡುವವ ಮತ್ತೊಬ್ಬ ।
ಗುಣವರಿತು ಸಾಗು ಅಡವೇಶ ॥೧೪೦॥

ಶೆಟ್ಟಿಯಿಂ ಜಂಗಮಗೆ ಪಟ್ಟವಾದರೂ ಸಾಧ್ಯ !
ಸಿಟ್ಟಾದರವನು ಪಟ್ಟ ಛಟ್ಟೆನ್ನುವದು !
ಗಟ್ಟಿಡಿದು ಸಾಗು ಅಡವೀಶ ||೧೪೧||

ಸತ್ತೊಂದು ಮೂಗಿಂಗೆ ಚಿತ್ತೊಂದು ಶ್ರವಣಂಗೆ ।
ಎತ್ತೊಂದು ಶಿವಂಗೆ ಮಠಕೋರ್ವ ಗುರುಮೂರ್ತಿ ।
ಮತ್ತೋರ್ವನೆಂತು ಅಡವೀಶ ||೧೪೨||

ತಾನೋರ್ವ ತನ್ಮಠಕೆ ಘನ ಮಠಾಧಿಪತಿಯಿರೆ ।
ಸನಿಹವಿರು ಮಠಕೆರೋರ್ವ ಮರಿವಿರಲೆಂಬ ।
ಹೀನಗುಣವ್ಯಾಕೊ ಅಡವೀಶ ||೧೪೩||

ಸಿರಿಯು ಶಿಷ್ಯರ ಕಂಡು ಕರೆದುಣ್ಣಿಸುವ ಸ್ವಾಮಿ ।
ಗುರು-ಸಾಧು-ಪಾತ್ರ-ಕಾವಿಧರಿಸಿರು ಸೂಳೆ ।
ಸಿರಿಲಕ್ಷಣೆನ್ನು ಅಡವೀಶ ||೧೪೪||

ಸ್ಮರಣೀಯ ಪುರುಷಾರ್ಥ ನರಿಸದಿಹ ಸ್ವಾಮಿಗಳು ।
ಕ್ಷುದ್ರ ಸಿದ್ಧಿ ಬುಡಬುಡಕ್ಯಾ ಪಾತ್ರದಿರೆ ।
ಗುರು ಪೀಠವೇನು ಅಡವೀಶ ||೧೪೫||

ಪೀಠವೇರುವ ಪೂರ್ವ ಗೂಟ ಕೆಳಗಿದೆ ನೋಡು ।
ಸಾಟಿ ಶಿರ ಮೇಲೆ ಚೂರಿಯಿದೆ–ತಪ್ಪಿದರೆ ।
ನೆಟ್ಟು ಒದ್ದಾಟೆ ಅಡವೀಶ ||೧೪೬||

ನೋಡಿದೊಡೆಯಲ್ಲಲ್ಲಿ ನಡೆಯುತಿವೆ ಮಠನ್ಯಾಯ ।
ತೊಡಕು ಕಾರಣವು ಯತಿಮೋಹ–ಬಂಧುತ್ವ ।
ಮಾಡಿತೋ-ರಾಡಿ ಅಡವೀಶ ||೧೪೭||

ಚೊಕ್ಕಯತಿ ಗುರು ಮಠದಿ ಠಕ್ಕ ಬಹು ಕ್ರಿಮಿಯಂಗೆ ।
ಹಕ್ಕು ಬೇಕಂತೆ ಹಕ್ಕು ಮೂಗಿನೊಳೈತಿ ।
ಹೊಕ್ಕು ತೆಗೆಯಣ್ಣ ಅಡವೀಶ ||೧೪೮||

ಹೇಶಿ ಗುರುಡ್ರೋಹಿಗಳು ತುಸು ಭೂಮಿ ಮತವಿರಲು ।
ಹೇಶಿ ಕೃತಿಯಿಂದ ಕಸಿದುಕೊಳ್ಬಹುದು ಕೃಪೆ ।
ಕಸಿದುಕೊಳ್ಳುವರೆ ಅಡವೇಶ ||೧೪೯||

## ಸನ್ಯಾಸ–ಸನ್ಯಾಸಿನಿ

ಮೌನೊಂದು ಸನ್ಯಾಸ ಕೊನೆಯೊಂದು ಸನ್ಯಾಸ ।
ಮುನಿನಾಟ್ಯ ಪಾತ್ರ ರಾವಣನು ಸನ್ಯಾಸಿ ।
ಸನ್ಯಾಸವೇನು ಅಡವೇಶ ||೧೫೦||

ಮನದ ಸನ್ಯಾಸವೇ ಮಾನ್ಯತೆಯ ಸನ್ಯಾಸ ।
ಜನಕೆ ಪರಿಚಯದ ಸೂಚನಾರ್ಥವೆ ಕಾವಿ
ಮನಕೆಂಥ ಕಾವಿ ಅಡವೇಶ ||೧೫೧||

ನೆರಳು ನೆಲದಾಹಾರ ನೀರು ಮೊಳಲಂಗೋಟಿ ।
ಕರ ಪಾತ್ರೆ ಬಳಕೆ ಮಿತಿಯಿರಲು–ಲೌಕಿಕರು ।
ಪರಿಪೂರ್ಣ ರಕ್ತಿ ಅಡವೇಶ ||೧೫೨||

ಕರಸತಿಯ ಬಿಡದೆ ನೀ ಧರಿಸಿದೇಕೊ ಕಾವಿ ।
ವಿರಿಸಿರುವ ವೇಷದುದ್ದೇಶವೆಂಥದದು ।
ಚರಿತೆ ಹೇಳಯ್ಯ ಅಡವೇಶ ||೧೫೩||

ಹಿಡಿಯದದು ಕಡೆತನಕದೊಡಲು ಬಳಗದ ಕರುಳ ।
ಕಡೆಗೊಮ್ಮೆ ಕಳ್ಳಿಯಾಗಿಹುದು ಕಂಡಿಹೆನು ।
ಹಿಡಿದವಗೆ ಹುಣ್ಣು ಅಡವೇಶ ||೧೫೪||

ಸೋಡಪತ್ರದ ಸತಿಯು ಕೂಡ ರತಿರಸವೆಂತು ।
ಕಡೆಗಾದ ಯತಿಗೆ ಜೊತೆ ಬಂಧು ಬಾಂಧವ್ಯ ।
ವಿಡುವನರ ಹೆಡ್ಡ ಅಡವೇಶ ||೧೫೫||

ಮಾನ್ಯಯತಿಧರ್ಮ ರಸ ಉಣ್ಣುತಲಿ ಹೊರಟಿರುವ ।
ಕುನ್ನಿಂಗೆ ಮೇಣು ಕರಿಗಂಜುದೇಕೆ ಗತಿ ।
ಚನ್ನ ಸ್ವಾತಂತ್ರ್ಯ ಅಡವೇಶ ||೧೫೬||

ಹಸಿದ ಸಿಂಹವು ಹುಲ್ಲುರಸ ಕುಡಿಯುದೆಂಬ ನುಡಿ ।
ಭಸಿತ ಭೂತಿಗಳು ಕಷ್ಟದೊಳಗಿರೆ ಧರಮು ।
ದುಸಿರು ಕಟಿಬದ್ವ ಅಡವೇಶ ॥೧೫೭॥

ಬಣ್ಣವೇಣ್ ಗಡ್ಡವಿರೆ ಸನ್ಯಾಸವಹುದೆನಲು ।
ವಿನ್ನ ಕೆಂಪಾದ ಹೋತಿಂಗೆ ಗಡ್ಡವಿರೆ !
ಸನ್ಯಾಸಿವೆನ್ನು ಅಡವೇಶ ॥೧೫೮॥

ರಸಪೂರ್ತಿ ಚೈತನ್ಯ ವಿಷಯೇಂದ್ರಿಯಗಳಿರಲು ।
ರಸಿತೆ ಸನ್ನಿಧಿರೆ ಸುಪ್ತಸ್ಥಿತಿವಿರೆ ಮುಗ್ದ
ಹೆಸರಿವಗೆಯೊಪ್ಪು ಅಡವೇಶ ॥೧೫೯॥

ಕನ್ಯ ಪ್ರೌಢೆ ವಿಧವೆಗೆ ಸನ್ನಿಹಿತ ಸನ್ಯಾಸ ।
ಮನ್ನಿಸುವ ಶೃತಿಗೆ ಮಾಹಾದೇವಿ ವೈರಾಗ್ಯ ।
ಹೊನ್ಗಳಸವಂದು ಅಡವೇಶ ॥೧೬೦॥

ರಸ ದೃಷ್ಟಿ ಚೈತನ್ಯ ವಿಷಯೇಂದ್ರಿಯಗಳಿರೆ ಪು ।
ರುಷ ಸನ್ನಿಧಿಯೋಳ್ ಸುಪ್ತಸ್ಥಿತಿಯಿರೆ ಮುಗ್ದೆ
ಹೆಸರಿವಳಿಗೊಪ್ಪು ಅಡವೇಶ ॥೧೬೧॥

ಲೋಕ ರೂಡಿಯೆ ಯತಿಯುವೇಕಾಕಿ ಕಂಡಿಹನು ।
ಲೋಕ ಮಿರಿರುವಳಾಧ್ಯಾತ್ಮ ಶಕ್ತಿಯಳ ।
ಸುಖದಿಯಾಧೀನ ಅಡವೇಶ ॥೧೬೨॥

ಮಾತೆಯಾವಳು ಸುತಗೆ ಯತಿಯಾಗಲೊಪ್ಪುವಳು ।
ಸತಿ ಯಶೋಧರೆಯು ರಾಹುಲನ ಕಳಿಸಿದಳು ।
ಪತಿ ಬುದ್ಧನಡಿಗೆ ಅಡವೇಶ ॥೧೬೩॥

ಸುತಗೆ ಯತಿಯಾಗಲ್ಕೆ ಪಿತನಾವನೊಪ್ಪುವನು ।
ಋತಧೃಜ ಬುದ್ಧರೊಪಿದರಿದಗೆ ಮುದ್ದು ।
ಸುತರಿಂಗೆಯಂದು ಅಡವೇಶ ॥೧೬೪॥

ತನುಜ ದೈವದನಾಟ್ಯ ಜನನಿಂಗೆ ಗೊತ್ತೇನು ।
ತನುಜನಾಪಾದ ಮಕರೆಳೆಯಲಾ ಜನನಿ ।
ತಾನೆ-ಯೊಪ್ಪಿದಳು ಅಡವೇಶ ॥೧೬೫॥

## ಜಗದಾರ್ಯ-ಪೀಠ

ಎರಡು ನುಡಿಯರಿತಮೇಲ್-ಗುರುವಾಗಲೆಂಬಾಸೆ ।
ಮರುಳನೀನದಕೆ ನಿಶ್ಚಯದಿಯೊಪ್ಪಿದರೆ ।
ಶರಶಯನ ಸಹಿಸು ಅಡವೇಶ ॥೧೬೬॥

ಸೊಗಸುಮತಿಗಳಿಗಿಲ್ಲ ಬಗರಿಯಾಟಂತಲ್ಲ ।
ತಗಣಿಗಳ ಬುದ್ಧಿಗಳಿಗಿಲ್ಲ-ಪೀಠ ನಿಜ ।
ಯೋಗಿಗಳಿಗುಂಟು ಅಡವೇಶ ॥೧೬೭॥

ಜಗದಾರ್ಯದಭಿನಾವು ಗೂಗಿಗಳಿಗೆಂತಯ್ಯ ।
ಜಗದೊಡೆಯನಾಜ್ಞೆಯಿಂ-ಬಂದನವತಾರಿ ।
ಯೋಗಿಗಳಿಗುಂಟು ಅಡವೇಶ ॥೧೬೮॥

## ಸಾಧು-ಸುಧೆ

ನಾರಿ ಜೀವನ ಭಾವಿ ಚಾರುಪಾಲನ ಚಿಂತೆ ।
ನಾರಿ ಪ್ರಿಯಗಹುದು ಸಾಧುಯತಿಗಲ್ಲವದು ।
ಪರಿಯ ಪಾಲನತೆ ಅಡವೇಶ ॥೧೬೯॥

ಕೋಶ-ಜಗ-ಸತಿ-ಮಿಥ್ಯದುಸಿರು ಬಿಡುವನಿಂಗೆ ।
ಯಾಶೆಯುವಗೇಕೆನಲು ಬಿಗಿದ ಮುಖಧರಿಸಿ ।
ಮೂಷಕದ ಓಟ ಅಡಮೇಶ ॥೧೭೦॥

ಬಂಧು ಬಳಗದ ಮೋಹ ಗಂಧ ಸೆಳೆಯುದು ಬಿಡದು ।
ಮುಂದೆ ಹರಡುತಲಿ ಲಾಂಛನದೊಳಿಂತಿರಲು ॥
ಮುಂದಗೇನ್ನುಡಿಯು ಅಡವೇಶ ॥೧೭೧॥

ತನ್ನ ಸುತ ಸತಿವೆಂದು ಕುನ್ನಿಗಳ ನುಡಿಯುಯ್ಯ ।
ಚನ್ನ ಸಾಧುವರ–ಎನ್ನ ಶಿಷ್ಯರುಪೆನಲು ।
ಭಿನ್ನವೇನಿಹುದು ಆಡವೇಶ ॥೧೭೨॥

ಕಾವಿಯಂ ಧರಿಪಂಗೆ ಶೀವಿನೋಟಚ್ಚುವಿಕೆ ।
ಯ ವಿಚಾರದಿಂದ–ದ್ರೋಹಿಯಾಗುದುವಲ್ಲ ।
ಸಾವಪ್ಪು ಲೇಸು ಆಡವೇಶ ॥೧೭೩॥

ತುಂಗ ಹೆಸರನು ಗಳಿಸಿ ತುಂಗ ಜಂಗಮನಿಂದೆ ।
ರಂಗದೊಳು ನಿತ್ಯ ಮಾಡುವಾ ಸಾಧುಂಗೆ ।
ಹೊಂಗನಸುವೇನು ಆಡವೇಶ ॥೧೭೪॥

ರವಿಯಾದರೇನಾಯ್ತು ಸವಿಯಾಗಿ ಸಾಗ್ಬೇಕು ।
ದ ವಿಚಾರ ಕೃತಿಯು ಸಲ್ಲದದು ಸಾಧುಂಗೆ ।
ಸುವಿಚಾರಿ ಸಾಧು ಆಡವೇಶ ॥೧೭೫॥

ಸರ್ವವೇದಾಂತಾರ್ಥ ಸರ್ವಜ್ಞನಡಿ ಸಾಧ್ಯ ।
ಗರ್ವವಿಷಯಾದಿ ನಳಿದವನು ಸುಧೆ ಸಾಧು ।
ಶರ್ವ ಶಮು ಸತ್ಯ ಆಡವೇಶ ॥೧೭೬॥

ಮತ್ಸರತೆ ವಿಡಿದವನು ಮತ್ಸ್ಯದಿಂ ಕೀಳು ತಿಳಿ ।
ಮತ್ಸ್ಯಗಾಶ್ರಯು ಜಲ ಮತ್ಸರಾಶ್ರಯು ನಿನಗೆ ?
ಕುತ್ಸಿತಳಿ ಸಾಧು ಆಡವೇಶ ॥೧೭೭॥

ಆಡುವೇಕೆ ವಿದುವೇಕೆ ಯೋದರುತಿಹ ಮಾನ್ಯರರೆ ।
ಬದಿಗಾವುದನ್ನು ವಿರಿಸಿದಿರಿ ವಿವರಿಸಿರಿ ।
ಸಾಧು ಸರ್ವಜ್ಞ ಆಡವೇಶ ॥೧೭೮॥

ಜಂಗಮ ಜ್ಯೋತಿ

ಸಿಂಧು ಜಂಗಮನಿಂದೆ ಹಂದಿ ಮಾಡಿದರೇನು ।
ಗಂಧ ಗ್ರಾಹ್ಯಗುಣ ತುಂಗ ಘನತೆಯು ಚಿರವು ।
ನಂದ ರೂಪಿರಲು ಆಡವೇಶ ॥೭೭೯॥

ಬೋಧಿಸಲು ಜಂಗಮರ ವೇದಸ್ಥಿತಿ ಬರುದೆಂತು ।
ಕ್ರೋಧ ಕಪಟಳಿದು ಸಾಗಿರಲು ಸರಮಾನ್ಯ ।
ವೇದಮೂರ್ತಿಗಳು ಅಡವೇಶ ॥೧೮೦॥

ಜಂಗಮರ ವೈಭವವ ಕಂಗಾಲಗೇಡಿಗಳು ।
ರಂಗದೊಳು ಕಂಡು ವ್ಯಂಗ ಮಾಡುತಿರೆ ಬಹು ।
ರಂಗ ಪಾತ್ರದಲಿ ಅಡವೇಶ ॥೧೮೧॥

ದಕ್ಷಿಣಾಸೆಯ ಮೇಲೆ ಲಕ್ಷಿಸುತ ಕೂಡ್ರುವದು ।
ಲಕ್ಷಣದುವಲ್ಲ ಜಂಗಮನು ಸ್ವಬಲದ ।
ಸಕ್ಷೆಯಲ್ಲಿರಲಿ ಅಡವೇಶ ॥೧೮೨॥

ತಣಿಸುತಲಿ ಕರ್ಮದಿಂ ದಕ್ಷಿಣೆಯ ಕೊಡದ ಗಾವಿಲ ।
ರುಣಿಸುತಿಹ ಲಕ್ಷ ಗಳಿಕೆಯಾ ನೌಕರಿಗೆ ।
ಹಣಸುರಿಸುತಿಂದು ಅಡವೇಶ ॥೧೮೩॥

ಓತು ಶಿಷ್ಯರ ಮೇಲೆ ಕಾತರಿಸಿ ಕೂಡ್ರುವದು ।
ಖಾತ ಮೂರ್ತಿಗಳ ಧರ್ಮಲ್ಲನಾವನಿರೆ ।
ಕೃತಿ ಸ್ವಂತ ಶ್ರೇಷ್ಠ ಅಡವೇಶ ॥೧೮೪॥

ತುತ್ತಿನಾಸೆಗೆ ಶ್ರೇಷ್ಠಗತ್ತಿಡದ ಹಿರಿಯರರು ।
ಎತ್ತು ಸಮವಲ್ಲ ಮುತ್ತು ಸಮಶ್ರೇಯಾತ್ಮ ।
ತತ್ವರಿತು ಸಾಗು ಅಡವೇಶ ॥೧೮೫॥

ಹಿಟ್ಟು ಜೋಳಿಗೆಯೊಳಿಗೆ ಹೊಟ್ಟುಹಾಕುದು ಕಂಡು ।
ದಿಟ್ಟ ಜಂಗಮನಿದನರಿತು ಪದ ಪಾತ ।
ನಟ್ಟ ಮುಳ್ಳಗೆದು ಅಡವೇಶ ॥೧೮೬॥

ಶರಣಸ್ಥಿತಿ

ತಂತ್ರವೆಷ್ಟಿರಲೇನು ಮಂತ್ರಮಂಗಳಸೂತ್ರ ।
ಶಾಂತ ಶರಣರಿಗೆ ಶರಣ ಸತಿರಸರತಿಯು ।
ಕಾಂತಿ ಸಮವೆಲ್ಲಿ ಅಡವೇಶ ॥೧೮೭॥

ಸ್ಪಷ್ಟ ಮತಿವಿರಲು ಜಗಸ್ಪಷ್ಟದೊಳಗಿನ ನೋಟ ।
ತುಷ್ಟಿತೋರುವದು ಹೊರಗೊಳಗು ಮತಿಯಂಗೆ ।
ಬ್ರಷ್ಟಂಗೆಯಲ್ಲ ಅಡವೇಶ ॥೧೮೮॥

ಶಾಂತರಾ ಜೀವನದಿ ಕ್ರಾಂತಿ ಮುಸುಕದು ಬಿಡದು ।
ಕಾಂತಿ ಸೋಮನಿಗೆ ಗ್ರಹಣವಿರಲೇನು ಸರಿ ।
ಶಾಂತಿ ಬಸವಣ್ಣ ಅಡವೇಶ ॥೧೮೯॥

ನಾದಾನುಸಂಧಿ ಗುಣಿಯಾದರದ ಶರಣಸ್ಥಿತಿ ।
ಹಾದಿ ಮಧ್ಯದಲಿಯುಷ್ಟಿಹಳು ತನುವಳಿದು ।
ವೇದ ವಿಟಸಾಂಗ ಅಡವೇಶ ॥೧೯೦॥

ಗಿರಿಜೆ ಸಂಗಮುಕಾಗಿ ಶರಧಾರೆ-ಫಲ-ಭಂಗ ।
ಪರಿಸಕ್ರಿಯಾತ್ಮವಿರಲಲ್ಲಿ ನಿಷ್ಕ್ರಿಯದ ।
ಸರಸಾಂಗವಿಲ್ಲಿ ಅಡವೇಶ ॥೧೯೧॥

ಹೊಸ ಹಸಿತೆ ಮೈದುಂಬಿ ಹೊಸತು ಮೋಹನು ಬೇರೆ ।
ಪಾಶದಿ ಮರಂದ ಘ್ರಾಣಿಸಿದ ಮದಜೀವಿ ।
ಹೊಸತು ಚೈತನ್ಯ ಅಡವೇಶ ॥೧೯೨॥

ಕದ್ದ ಕೃತಿ ಮುದ್ದು ಪ್ರಕಟಿದ್ದು ಮುಕುರೊಳು ತೋರೆ ।
ವೃದ್ಧಿರತಿವೇಗ ಸದ್ದಿಲ್ಲದಾ ಸತಿಯ ।
ಮುದ್ದು ಶಿವಯೋಗ ಅಡವೇಶ ॥೧೯೩॥

ಕಲೆನೆಲೆಯ ನಲುಮೆಯುಲಿ ಸುಲಲಿತಂ ವಿಸ್ಮೃತಿಯು ।
ಸಲುಗೆ ಸಂಗದಲಿದರೆಗಣ್ಣು ಚಿದಕ್ಷಿಯುದಿ ।
ಕುಲ ಭಾವ ಲೋಪ ಅಡವೇಶ ॥೧೯೪॥

ರೆಪ್ಪೆ ಬಡೆಯದನೋಟಳಪ್ಪಿದಾ ಚಿದ್ಬಿಂದು ।
ಕಪ್ಪು ವಸ್ತ್ರದೊಳು ಕಲೆದೋರಿ ಸಖಿಕಂಡು ।
ಯೊಪ್ಪಿದಿಟರಕ್ತಿ ಅಡವೇಶ ॥೧೯೫॥

ತುಂಬಿ ತನುರಸವರ್ಣ ಹಂಬಲಿಸದಾಗರ್ಭ ।
ಬಿಂಬ ಪೂರ್ಣವಿರೆ ಕಾಮಿಗಳು ಕಂಡು ಪರಿ ।
ಬೆಂಬತ್ತಿ ಭಂಗ ಅಡವೇಶ ॥೯೬॥

ನಾದಳಿದ ವೇದನೆಯ ಮದವಂಗನಲ್ ನಲ್ಲಿ ।
ಕದ ಮುಕ್ತರಂಗ ಬದಿಯಂಗೆ ಕಾಣದದು ।
ದಿದನರಿವ ನೋರ್ವ ಅಡವೇಶ ॥೯೭॥

ಇನಿಯನಾ ಸಜ್ಜಿಕೆಯೆ ಮನಮಗ್ನ ತನು ನಗ್ನ ।
ಗುಣಗುಣಕೆ ಭಗ್ನ ಮನುಜಶರವಿಘ್ನಳಿದ ।
ಸನಿಹ ಸಲ್ಲಾಪ ಅಡವೇಶ ॥೯೮॥

ಕೃತ್ಯ ಕಲ್ಮಷವಿಡಿದ ರಕ್ತಿಸತಿಯರು ಉಂಟು ।
ಸತ್ಯಮತಿ ಸತಿಯು ಶರಣೋರ್ವ ಬಳಗದಲಿ ।
ಮೃತ್ಯುಭಯನಳಿದು ಅಡವೇಶ ॥೯೯॥

ಸರಸದೊಳು ಪಂಕಜದಿ ಹೊರದೋರದಾ ಶಯನ ।
ಶರಣಸತಿ ತುಂಗದಪ್ಪುಗೆಯೆ ದಳ ಪರದೆ ।
ಹರಿದು ರಸದೋರಿ ಅಡವೇಶ ॥೧೦೦॥

ವಧುಗಿಂತ ಮಧುಭರಿತ ಸುಧಿಶರಣ ವಧು ಶ್ರೇಷ್ಠ ।
ನಿಧಿ ಗರ್ಭ ಗೂಢ ವರನೋರ್ವನರಿವ ಷಂಢ ।
ಮದ ಜೀವಿಗೆಂತು ಅಡವೇಶ ॥೧೦೧॥

ಗಂಪುಗಂಡನ ಕಂಡು ಸಂಪನ್ನ ಸತಿಯರಳು ।
ತಂ ಪತಿಯನೆಲ್ಲೆಡೆಗೆ ಭಾವಿಪಳು ತೆರದಿ ।
ಸಂಪನ್ನ ಶರಣ ಅಡವೇಶ ॥೧೦೨॥

## ಭಿಕ್ಷಾಚರ್ಯ

ಭಿಕ್ಷೆಯನು ನಿಂದಿಸುವ ಭಕ್ಷಕರು ಬಹಳುಂಟು ।
ರಕ್ಷಣೆಗೆ ತಾವು ಸರ್ವದಿಶೆಯಿಂ ವಿವಿಧ ।
ಭಿಕ್ಷೆ ಬೇಡುವರು ಅಡವೇಶ ॥೧೦೩॥

ಒಂದಿಲ್ಲದೊಂದು ತೆರ ಮಂದದಿಂ ನಡೆದಿಹುದು ।
ಚಂದ್ರಧರ ಪ್ರಿಯದ ಭಿಕ್ಷಾಟನೆಲ್ಲರೊಳು ।
ಗಂಧವನು ಕಂಡ ಅಡವೇಶ ||೩೮೪||

ಕೆಲರಿದಕೆ ಲಂಚೆಂಬ ಕೆಲರಿದಕೆ ಋಣವೆಂಬ ।
ಕೆಲರು ಚಹಪಾನ–ದಕ್ಷಿಣೆಯಾಶೀರ್ವಾದ ।
ಜಲಬೆರೆತ ಬಣ್ಣ ಅಡವೇಶ ||೩೮೫||

ತಿರಿಕೆ ಸರ್ವರೊಳಿಹುದು ಪರಿಕೆಲರು ಬಾಹ್ಯದಾಂ ।
ತರಿಕ ತನು ಧನನ ಬಂದಿರುವ ನೆವನೋಡು ।
ಹರಿದು ನಾನತ್ವ ಅಡವೇಶ ||೩೮೬||

ಭಿಕ್ಷೆಯೊಳು ಲಕ್ಷ್ಯಂಟು ತಕ್ಷಣವೆ ತೀಕ್ಷ್ಣ ನುಡಿ ।
ರಾಕ್ಷಸತೆ ದಾಳಿ ವ್ಯಡು ಕಠಿಣ ಕಾಯಕದಿ ।
ರಕ್ಷೆಯಿಂ ಸಾಗು ಅಡವೇಶ ||೩೮೭||

ಭಿಕ್ಷಾನ್ನದಿಂ ವಿದ್ಯಯಾಕ್ಷಣದಿ ಕಲಿತು ಕುಲ ।
ರಕ್ಷೆ ಪಡೆದಿಹುದದುಲ್ಲೇಖವಿರಲು ನಿಜ ।
ಲಕ್ಷವಿಡೆ ಭಿಕ್ಷೆ ಅಡವೇಶ ||೩೮೮||

ಭತೃಹರಿ ಭಗೀರಥ ಖ್ಯಾತ ಶರಣಾಳಿ ಕುಜ ।
ಶ್ರೀಶ್ಶೈಲವಾಸಿ ಮಲ್ಲೇಶ–ಧರಿಸಿರಲ್ ।
ಮಾತು ಮಥನೇಕೆ ಅಡವೇಶ ||೩೮೯||

ದಶಮುಖನ ಭಿಕ್ಷೆಯದು ನಾಶಮಾಡಿತು–ಪ್ರಾಣ ।
ಯಶ ಭಕುತಿ ಕೀರ್ತಿಯಹಂಕಾರಿಗಳು ಸಹ ।
ನಾಶವಾಗುವರು ಅಡವೇಶ ||೩೯೦||

ಭಿಕ್ಷೆಯಕೆ ಯತಿಪಾತ್ರ ರಕ್ಷೆಯದು ದಲಿತರಿಗೆ ।
ಶಿಕ್ಷಾಂಗದಡಿಯೆದಪರಾಧಿ, ಸುಜ್ಞಾನಿ ।
ಮೋಕ್ಷಾಂಗ ಪಾತ್ರ ಅಡವೇಶ ||೩೯೧||

ಗುರು-ಯತಿಗೆ-ಸಾಧುಂಗೆವಿರುವದೀ ಕಾಯಕವು ।
ಸುರೆಕಾಮ ಜಾರೆ ಕುವಿಲಾಸಕಲ್ಲ ಸಿರಿ ।
ತೊರೆ ಸುಧಾರಣೆಗೆ ಅಡವೇಶ ॥೨೧೨॥

ಲಕ್ಷ್ಮಾಧಿಪತಿಯುಂದು ಭಿಕ್ಷುತಾನಾದ್ಮೇಲೆ ।
ಭಿಕ್ಷೆ ಕಾಯಕವು ಚರಿತಾರ್ಥ ಬುದ್ಧಗತಿ ।
ಸಾಕ್ಷಿರಲು ತಾನೆ ಅಡವೇಶ ॥೨೧೩॥

ಬಿಡದೆನಗೆ ಜೋಳಿಗೆಯು ಬಿಡಗಿಸಿಂದಿಹುದಯ್ಯ ।
ಕೆಡಕು ಮತಿ ಕುಟಿಲರೇನೆಲ್ಲ ಸೆಳೆಬಹುದು ।
ಬಿಡಿದು ಕವಳಿಗೆಯು ಅಡವೇಶ ॥೨೧೪॥

ಅರಿವು-ಮರೆವು

ತನ್ನರಿವು ತನಗೆ ಬಲ ಕುನ್ನಿಗಳ ಬಲವೇಕೆ ।
ಚನ್ನ ನಡೆದವಗೆ ಲಂಪಟರ ಬೋಧನಲಿ ।
ಖಿನ್ನ ಫಲವಹುದು ಅಡವೇಶ ॥೨೧೫॥

ವಿಸ್ಮೃಳಿದ ವಿದ್ಯೆಗಳು ಹೊಸ್ನುಗಳಿಸಲು ದಾರಿ ।
ಚನ್ನಸಿರುಪಾಧಿ ತತ್ವರಿವು ಸಾಫಲ್ಯ ।
ದಿಸ್ಮೃಳಿದ ಜೊಳ್ಳು ಅಡವೇಶ ॥೨೧೬॥

ರಮ್ಯವೇಷಕ್ಕೆ ಕೆಲರಸ್ಮೃ ಪ್ರವಚನಕೆ ಮನ ।
ಧನ್ಯದಾಕ್ಷ್ಯರ್ಯ ಕೃತಿಗೆ ಮೆಚ್ಚದೆ ಸ್ಥಿತಿಯು ।
ಧನ್ಯಗುರು ಮೆಚ್ಚು ಅಡವೇಶ ॥೨೧೭॥

ಆತ್ಮಬುದ್ಧಿರುವವಗೆ ರತಿ ಪ್ರೀಯುವಹುದು ಆ ।
ಧ್ಯಾತ್ಮಬುದ್ಧ್ಯಳಿಯಲ್ ಸುಖಬುದ್ಧಿ ದೂರವದು ।
ಗತಿಯರಿಯ ಮೂಢ ಅಡವೇಶ ॥೨೧೮॥

ಅರಿವಧರ್ಮೊಂದಳಿದು ಹೊರೆ ಧರ್ಮವರಿತೇನು ।
ಧರ್ಮಯುದ್ಧದಲಿ ಗೀತಾರ್ಥ ನರನರಿತು ।
ನಿರುಪಾಧಿಯಾದ ಅಡವೇಶ ॥೨೧೯॥

ಅರಿಯುದಕೆಯಾಶ್ರಮದ ವರ್ಣಭೇದಗಳಿಲ್ಲ ।
ಕಿರಿಯನಚಿಕೇತ ಮೈತ್ರೇಯಿ ಕೆಲರಿಂತು ।
ವರಿತು ಗಹನಾರ್ಥ ಅಡವೇಶ ॥೨೨೦॥

ಮಹಿಮರಿಗೆ ನಿಜವುಂಟು ಸಹಜಸ್ಥಿತಿ ಸಾಧ್ಯತೆಯು ।
ಸಹಡಾಂಭಿಕಂಗೆದಣು ಸಾಧ್ಯವಾಗದದು ।
ರಹಿತುಪಾಧಿಯದು ಅಡವೇಶ ॥೨೨೧॥

ವಿದ್ಯೆಯೆಷ್ಟಿರಲೇನು ಸಾಧ್ಯವಾದರುಪೇನು ।
ಗದ್ಯವಿರೆ ಪದ್ಯ ನಾಟ್ಯವಿರಲೆಲ್ಲ ಕುಲ ।
ವೇದ್ಯ ಒಂದಕ್ಕೆ ಅಡವೇಶ ॥೨೨೨॥

ಬಿತ್ತಿದರೆ ತಕ್ಷಣವೇ ಎತ್ತುಮೋಯುರ್ದೇನು ।
ಮುತ್ತು ತೆನೆಕಾಳು ಪಡೆಯುತಂಬಲಿ ಮುಂದೆ ।
ಬಿತ್ತಿತ್ತೈ ಬುದ್ಧಿ ಅಡವೇಶ ॥೨೨೩॥

ಅರಿವಿಗೆನಿತೋ ಮಹತೆ ಮರೆವಿಗೂಸಹವಿಹಿತ ।
ಮರೆತರಿತನಾಟ್ಯ–ದುಷ್ಯಂತನಾಲಾಪ ।
ಅರಿತು–ಸಲ್ಲಾಪ ಅಡವೇಶ ॥೨೨೪॥

ಯತ್ನವಿಲ್ಲದೆ ನಯನ ಸುತ್ತು ಮುತ್ತೆಲ್ಲ ಕಲೆ ।
ಸತತ ನೋಡುತಿರೆ ವಿರುವಂತೆ ವಿರಬೇಕು ।
ಯತ್ನಿರದ ಯೋಗ ಅಡವೇಶ ॥೨೨೫॥

ನಿಜವೇದಾಂತಿ

ಸನ್ಮಾರ್ಗದೊಳು ನಡೆಯುತನ್ಯರರ ನಡೆಸುವವ ।
ಮಾನ್ಯವೇದಾಂತಿ ವಿಷಯದೆಡೆಯೊಯ್ಯುವವ ।
ಉನ್ನಿಯಿಂ ಕೀಳು ಅಡವೇಶ ॥೨೨೬॥

ಮರುಳ ದುರುಳತೆಯಳಿದ ಸರಳಸಿದ್ಧಾಂತಗಳ ।
ಸರತಿ ಬಹು ಕಡಿಮೆ ಸತ್ಯಶೋಧನೆರಹಿತ ।
ಸರಣಿ ಬಹು ದುಡಿಮೆ ಅಡವೇಶ ॥೨೨೭॥

ವೇದಾಂತಿಗಳ ಘೋಷ ಹಾದಿಯೊಳು ಬಿಡದಿಹುದು ।
ಹದಪೂರ್ತಿ ವರ್ಣ ಕಾಣದಿವರೊಳುವೆದ್ದು ।
ಕದರಿರದ ಜಂತ್ರ, ಅಡವೇಶ ॥೨೮॥

ಇತ್ತೊಂದಲಾ ನಾಯಿ ಅತ್ತೊಂದು ಬೊಗುಳುತಿರೆ ।
ಸತ್ಯಾರ್ಥದರಿವು ಉಂಟೇನು ನಿಜದರ್ಥ ।
ಸತ್ತಿತೋ ಸತ್ಯ ಅಡವೇಶ ॥೨೯॥

ಹೇಳುವವರಂ ಕಂಡು ಸಲೆಸುಭಾಷಿತ ನೆನಪು ।
ಎಲ್ಲರೂ ಬ್ರಹ್ಮನ ಕುರಿತು ಹೇಳುವವರೇ ।
ಕಲಿಯುಗದಿವೆಂದು—ಅಡವೇಶ ॥೩೦॥

ವೇದಾಂತ ಗೂಢಾರ್ಥ ಮದಜೀವಿ ಮಾರುವನು ।
ವೇದಪೂರ್ಣರರ ಕೃತಿಯಲ್ಲವಿದು ಸತ್ಯ ।
ಹದವರಿತ ಬೋಧ ಅಡವೇಶ ॥೩೧॥

ದುರುಳವೇದಾಂತಿಗಳ ಗರಳನುಡಿಯಾಲಿಸುತ ।
ಮರೆತು ನೀತಿಯನು ಕಂಡು ನಿಜವೇದಾಂತಿ ।
ಮರಗುವದು ಕಂಡ ಅಡವೇಶ ॥೩೨॥

## ಉಯ್ಯಾಲೆ

ಧರ್ಮಾರ್ಥಕಾಲ ಮೋಕ್ಷ ಚಾರಚರಣಾಧಾರ ।
ಪರಿಯಂಕ ಚಾರ್ಸರದಿ ಕಟ್ಟಿತೂಗ್ಮಂಚ ।
ನೇರಿ ಸರಸಾಡು ಅಡವೇಶ ॥೩೩॥

ಜ್ಞಾನಿ ಮಾನಿನಿ ಶಕ್ತಿ ಸನಿಹ ಸಂಬಂಧಾಂಗ ।
ತನಿಯ ರಸ ಲೀಲೆ ಶ್ರಾವಣದಿ ಮಾತ್ರವಲ್ಲ ।
ಸಾನಂದ ನಿತ್ಯ ಅಡವೇಶ ॥೩೪॥

ಎರುತಿದೆ ಇಳಿಯುತಿದೆ ಕೊರಗುನರನುಯ್ಯಾಲೆ ।
ಹರಿಯುತಿದೆ ಹರಣವಾಗುತಿದೆ ಮರಳುತಿದೆ ।
ಗುರಿಯಂತ್ಯವೆಂತೊ ಅಡವೇಶ ॥೩೫॥

ಉಯ್ಯಾಲೆ ಸುಮ್ಮಿಹುದು ಮಾಯೆ ತೂಗುವಳಯ್ಯ ।
ಕಾಯಭ್ರಾಂತಿಗಳ ಮೋಹದಿಂದೇರಿಸುತೆ ।
ಸುಯ್ವೆನುತೆ ಪತನ ಅಡವೇಶ ॥೩೩೬॥

ಆಲೋಕದೀಲೋಕ ಸಾಲೋಕ್ಯದಾಸೇಕೆ ।
ಸಾಲಾವಳಿಡಿದು ಸಾರ್ಥಕ್ಯ ಸಾಧಿಸೈ ।
ಪಾಲಿಯಾಗದಿರು ಅಡವೇಶ ॥೩೩೭॥

ಹಸಿವೊಂದು ರಸವಿರದ ಹಸಿರೆಲೆಯ ರುಚಿವೊಂದು ।
ಹಸಿವು ಹಲವಾರು ಹಾಸಿಹೊಚ್ಚುವರಾರು ।
ಕಸವಿಸಿವಿದೇಕೊ ಅಡವೇಶ ॥೩೩೮॥

ನಿನಗೆ ನೀಂ ಹೇಳಿಕೊ ನಿನಗೆ ನೀಂ ತೂಗಿಕೋ ।
ನಿನ್ನನೀಂ ತಿದ್ದು ಆತ್ಮಗಾತ್ಮನೆ ಬಂಧು ।
ಹೆಣಗುತನವೇಕೊ ಅಡವೇಶ ॥೩೩೯॥

ಹೊರಗಿನುಯ್ಯಾಲೆ ಹೊರಗಿರಿಸಿ ನಿನ್ನೊಳಗರಿಯೊ ।
ಏರಿಳಿತ ಸ್ವಾಸದನ್ನೆಡದು ದಂಗುಲತೆ ।
ಮರಣಪರ್ಯಂತ ಅಡವೇಶ ॥೩೪೦॥

ಯುಗಲ ಗೀತ

ಭಕ್ತಿ ಬ್ರಹ್ಮಚಾರಿಯಗೆ ಭಕ್ತಿಪ್ರಿಯನುಪದೇಶ ।
ಶಕ್ತ್ಯಾಪಹರಣದಿಂ ದುಃಖಿರಾಮಗೆ ಶಿ ।
ಪ್ರೋಕ್ತಿ ಶಿವಗೀತೆ ಅಡವೇಶ ॥೩೪೧॥

ಶಂಭುಪ್ರಿಯ ರಾಮನಿಗೆ ಕುಂಭಜನೆ ಪಥದರ್ಶಿ ।
ತುಂಬುಹೃದಯದಿ ವಿರಜಾದೀಕ್ಷೆಯ ವಿಡಿದು !
ಶಂಭು ಕೃಪೆಪಡೆದ ಅಡವೇಶ ॥೩೪೨॥

ಪಾರ್ಥಗರುಹಿದ ಗೀತೆ ಸಾರ್ಥಕವು ಜಗಕೆ ।
ಯಥಾರ್ಥ ಚಿದ್ಬೋಧ ರಘುಗೆ ವಿಶ್ವರೂಪವ ।
ಮೂರ್ತಗೊಳಿಸಿದನು ಅಡವೇಶ ॥೩೪೩॥

ಹೊಸವಿಶ್ವರೂಪವದು ನರನ ಮತಿ ನೇತ್ರದಡಿ ।
ತೆರೆದ ಶಿವ ಬಾಯಿಯೊಳು ಮೇರು ಮುಂತಾದ ।
ಆ ರಾಮ ಕಂಡ ಆಡವೇಶ ॥೨೪೪॥

ಕುರುಕ್ಷೇತ್ರದೊಳಗಲ್ಲಿ ಆರಣ್ಯದೊಳಗಿಲ್ಲಿ ।
ಗಿರಿಧರನ ಬೋಧ ನರಗೆ ರಾಮುನಿಗಿಲ್ಲಿ ।
ಯುರಗಧರನಿಂದ ಆಡವೇಶ ॥೨೪೫॥

ಅಲ್ಲಿ ರಾಜ್ಯದದಾಹ ವಿಲ್ಲಿ ನಾರಿಯದಾಹ ।
ದಲ್ಲಿ ವೀರಾಂಶ ವಿಲ್ಲಿ ಶಾಂತತೆ ಧ್ಯೇಯ ।
ಯುಳ್ಳ ಸಂದೇಶ ಆಡವೇಶ ॥೨೪೬॥

ತನು ಚಕ್ಷುವಿದ್ದಾಗ್ಗೆ ಕ್ಷಣಕ್ಷಣಕೆ ಬಹುಕ್ಲೇಶ ।
ಜ್ಞಾನಚಕ್ಷುವಿಗೆ ಸನುಮತದ ಸಂತೋಷ ।
ವಿನಿತುಭಯಗೀತ ಆಡವೇಶ ॥೨೪೭॥

ಮಹಾ ಭಾರತ

ಜಾಡಿ ತಾಂತ್ರಿಕದಾಟ ನಡೆದು ವನವಾಸದಿಂ ।
ಕಡೆಗೆ ಮಹಾಯುದ್ಧ ಮುಗಿದುಯಾಗದು ಧರ್ಮ ।
ವಿಡಿದ ನುಡಿಗೂಡು ಆಡವೇಶ ॥೨೪೮॥

ರಾಮಾಯಣ

ಪಿತನಾಜ್ಞೆ ಪಾಲನದಿ ಸೀತಾಪಹರಣದಿಂ ।
ಹತಿಸಿ ರಾವಣನ ಸುಖದಿ ಸುತರಂ ಪಡೆದ ।
ಗತಿರಾಮ ಚರಿತೆ ಆಡವೇಶ ॥೨೪೯॥

ಅನುಷ್ಠಾನ

ಯೋಗಿಸಿಂಗ್ ಖಲದರೋಡಿಗರ ವಾಸ್ತವ್ಯ ಮಹ :
ತೆ ಗವಿಯಲ್ಲಿಹುದು ಮೂರರೊಳು ವಾಸ್ತವಿಕ ।
ಸಗತಿವಿಹುದೇನು ಆಡವೇಶ ॥೨೫೦॥

ನಿರಭೀಕ ನಿಲುಕುಗತಿ ನಿರಾಮಯ ನಿರಾಳತೆ ।
ಸಿರಿಯಳಿದ ವಿಜ್ಞ ವಿಜಿಗೀಷು ರುಚಿರಹಿತ ।
ಸರಳಯತಿಯೋಗಿ ಅಡವೇಶ ॥೩೫೧॥

ಗಂಭೀರ ನಿಲವುಮೇಣ್ ಗಂಭೀರ ಹಿನ್ನೋಟ ।
ತುಂಬು ಸ್ಥೈರ್ಯಗತಿ ನಿರಿತಪ್ಪದಾ ಬೇಟ ।
ಯಿಂ ಬದ್ಧ ದೃಷ್ಟಿ ಅಡವೇಶ ॥೩೫೨॥

ಕಾಳರಾತ್ರಿ ವಿಹಾರಿ ಕಾಳಿಕಾ ವ್ರತ ಜೀವಿ ।
ಕಾಳಜ ಕಠೋರ ಮದ್ದಾನೆ ಕ್ರೂರ ಗತಿ ।
ಮೇಳಗತಿ ಖಲರು ಅಡವೇಶ ॥೩೫೩॥

ವಿರುವದೀಕ್ರಮದಿ ಗುಣವಿರು ಮೂವರೊಳುವಿಹುದು ।
ವಿರದು ಡಾಂಭಿಕರನುಷ್ಠಾನದೊಳುವೇನು ।
ಹಿರಿಮೆ ಕಾರ್ಯಗುಣ ಅಡವೇಶ ॥೩೫೪॥

ಗುಪ್ತ ಭೋಜನವಿಡಿದು ಜಪದನುಷ್ಠಾನೇಕೆ ।
ಸ್ವಲ್ಪಾ ತಿನಲಿಲ್ಲವೆನಬೇಡ ನಿನ್ ಕಾಯ ।
ಒಪ್ಪುತಿರೆ ಸ್ಪಷ್ಟ ಅಡವೇಶ ॥೩೫೫॥

ಗುಪತನರ ಪತನೊಮ್ಮೆ ಕಪಟು ಕೃತಿ ಕೆಡಕೊಮ್ಮೆ ।
ಕುಪತ ಗರ್ಭವದು ಪ್ರಕಟ ರುಜೆ ನಿಶ್ಚಿತವು ।
ದಪ್ರಕಟವೊಂದು ಅಡವೇಶ ॥೩೫೬॥

ಪ್ರವಚನ ಪಸರ

ವಿಷಯ ಬೋಧನ ಮೊದಲು ವಿಷಯ ತಾಂ ಅರಿಬೇಕು ।
ಒಸೆದ ವರಬೋಧ ಮುಸಕಳಿದು ಮನುಜರೊಳು ।
ಪೊಸತು ಫಲ ಸಿದ್ಧಿ ಅಡವೇಶ ॥೩೫೭॥

ವೇದದಿಂ ಶಾಸ್ತ್ರಾರ್ಥ ರಾಗವಮಾಡಿದರೇನು ।
ರೋಗಿಯೌಷಧದ ಹೆಸರು ನೆನೆಯುದರಿಂದ ।
ರೋಗ ಪರಿಹರವೆ ಅಡವೇಶ ॥೩೫೮॥

ವರ ನೀತಿ ನಿಷ್ಠುರನ ಸರಿಯಾಗಿ ವಃನ್ನಿಸದೆ ।
ಸರಿವಿರಡೆ ತಾಸು ತನ್ನನುವ ಹೇಳುತಿರು ।
ನರನೊಮ್ಮೆ ಭಂಗ ಅಡವೇಶ ॥೨೫೯॥

ಆಧ್ಯಾತ್ಮ ಬೋಧಕರೆ ವುದ್ಯ ಸ್ತ್ರಿಲೊಲರಿರೆ ।
ಮಧ್ಯಮ ಕನಿಷ್ಠ ಜೀವಿಗೇನೆನಬೇಕು ।
ಆಧ್ಯಾತ್ಮ ಶುದ್ಧ ಅಡವೇಶ ॥೨೬೦॥

ಹೇಳುವದು ವೇದಾಂಗ ಬಳಸುತಂ ಕಾಮಾಂಗ ।
ಸೆಳೆಯುತಂ ಬಿಡದೆ ವಿತ್ತಾಂಗ ಪ್ರತಿಯಂಗ ।
ಡೊಳಗೆ ಶಾಸ್ತ್ರಿಗಳು ಅಡವೇಶ ॥೨೬೧॥

ಎಣಿತು ಬೋಧಿಸಲೇನು ದಣುವು ಗ್ರಹಿಸದ ನರನು ।
ಡೊಣಕಿ ಮಿಂಡಂತೆ ವಿನಯಿರದ ನರನಾರಿ ।
ಮಣಕುವಿರುವಂತೆ ಅಡವೇಶ ॥೨೬೨॥

ಹೇಳಬೇಕೆಂಬಾಸೆ ಕೋಳಿಗೂ ಸಹಿತುಂಟು ।
ನೀಳ ಪರಮಾರ್ಥವೆನಿತಿಲ್ಲ ಜಾಲಿಯೊಳು ।
ಸುಳುಸಿಗದು ಗಂಧ ಅಡವೇಶ ॥೨೬೩॥

ಕಾರ್ಯ ಕಾರಣವಾದ ಮಾಯಾಂಶದಾ ವಾದ ।
ನಾಯಿಯೊಳಗುಂಟು ಪ್ರವಚನವು ಪಸರಲ್ಲ ।
ಧ್ಯೇಯ ಹಿಡಿ ಶ್ರೇಯ ಅಡವೇಶ ॥೨೬೪॥

ಶಸ್ತ್ರವಿದ್ಯಾನರರು ರಾಶಿವಿರಲೇನು ಮತಿ ।
ಶಾಸ್ತ್ರರುಚಿವಿರದ ರಣಹೇಡಿ ಪಾರ್ಥನಿಗೆ ।
ಶಾಸ್ತ್ರದಾ ಬೋಧ ಅಡವೇಶ ॥೨೬೫॥

ತುಂಗ ಜಂಗಮ ಸೋಗು ಮಂಗಗಳು ಪುರದಾಟು ।
ತಂಗಡೊಳು ವಿರಿಸಿ ಮಂಗನಾಟ್ಯದುವೇಕೆ ।
ಯಿಂಗುನಾರುವದು ಅಡವೇಶ ॥೨೬೬॥

ಶ್ರೇಷ್ಠ ಜಂಗಮರಡಿಯೆ ಶಾಸ್ತ್ರವಿದ್ಯೆಯ ಕಲಿತ ।
ಶಾಸ್ತ್ರಿ ನಾಮಿಗಳು ಜಂಗಮರ ನಿಂದಿಸುವ ।
ಶಸ್ತ್ರವನು ಕಂಡ ಅಡವೇಶ ॥೨೬೭॥

ಜಾರಸಂಗದೊಳಿರ್ದು ಜಾರಿಣಿಯ ಮನೆಯೊಳಗೆ ।
ಸಾರನರುಹಿಸುವ ಪುರಾಣಿಕ ಶಾಸ್ತ್ರಿಗಳ ।
ರಿರವ ಸಾರಯ್ಯ ಅಡವೇಶ ॥೨೬೮॥

ಸರಿ ಮುಂದೆವಿರುವನರ ಗುರಿವಿಡಿದು ಕೊಂಡಾಡು ।
ತಿರು ಪುರಾಣಿಕರು ಸೋಗು ಬೈರುಪಗಾರ ।
ವ.ರಿಗಳಿವರೆನ್ನಿ ಅಡವೇಶ ॥೨೬೯॥

ಯುಕ

ಶಕ್ತಿಯುಳ್ಳವ ಶಕ್ತ ಭಕ್ತಿಯುಳ್ಳವ ಮುಕ್ತ ।
ರಕ್ತಿ ಬಿಡದಿರಲವನುಪಯುಕ್ತ ಕಾಯಕದ ।
ಸೂಕ್ತಿಯುಪಯುಕ್ತ ಅಡವೇಶ ॥೨೭೦॥

ಮಾಡಿ ನುಡಿಯುವದೇಕೆ ಮಾಡಿದಾಕೃತಿಯದುವೆ ।
ನುಡಿದು ತಿಳಿಸುತಿದೆಯುಣಲು ಡರಿಕೆಯು ತಂತಿ ।
ಮಿಡಿಯಲ್ಕೆ ನಾದ ಅಡವೇಶ ॥೨೭೧॥

ಹಲವು ತೆರ ಕಾಯಕವಿರೆ ಶೀಲ ಸತ್ಯಾತ್ಮ ಸರಿ ।
ಹಲವು ಫಲದಂಗ ಜ್ಞಾನಿಯಜ್ಞಾನಿಯೊಳು ।
ಸಲುಗೆಯಿಂದಿಹವು ಅಡವೇಶ ॥೨೭೨॥

ಕಾಯಕಕೆ ಆಶ್ರಯದ ಕಾಯವಿರೆಯಾರೋಗ್ಯ ।
ಶ್ರೇಯ ಧರ್ಮವದು ಸಾಧಿಸಲು ಯೋಗ್ಯೆಂಬ ।
ಧ್ಯೇಯ ಸುಧೆ ಸೂಕ್ತಿ ಅಡವೇಶ ॥೨೭೩॥

ತನ್ನೊಡಲ ಹಸಿವೆಯದು ತಾನುಣಲು ಪೂರ್ತಿಯದು ।
ತಾನು ದುಡಿಯದಿರೆ ಬಡತನಳಿಯುವದೆ ನಿ ।
ಧಾನದಿಂ ನಡಿಯೊ ಅಡವೇಶ ॥೨೭೪॥

ಎಡರು ತೊಡರುಗಳನಳಿಡು ದುಡಿದು ಬಾಳುದು ಧರ್ಮ ।
ದುಡಿಮೆ ಸರ್ವರೊಳು ರಸ–ವಿರಸ ಬೆರಿಸಿಹುದು ।
ಕಡೆತನಕ ತಿಳಿಯೊ ಅಡವೇಶ ॥೨೭೫॥

ಸೊಕ್ಕು ಚೂರಾಗುವದು ನಕ್ಕುನಲಿದಾಡುತಿರು ।
ಬೊಕ್ಕ ರಕ್ಕಸರ ತಿಕ್ಕಾಟ ಜಗತುಂಬ ।
ತಕ್ಕ ಕೃಷಿಕಾಗು ಅಡವೇಶ ॥೨೭೬॥

ವರುಣಾಗ್ನಿ ವೃಕ್ಷ ಜಲ ಉರಿಯುತಿರೆ ಬೀಸುತಿರೆ ।
ಹರಿಯುತಿರೆ ವಿವಿಧ ಸುಫಲವಂ ಪೂರ್ತಿಸುವ ।
ಗುರಿಯುತ್ತರೇನು ಅಡವೇಶ ॥೨೭೭॥

ಬೆವರು ಸುರಿಸಿದ ಭೋಗ ಸವಿಯಾದ ಸಾಮ್ರಾಜ್ಯ ।
ಭಾವಿಡೆ ಹರಾಮ ರೋಮರೋಮದಿ ಹೊರಟ ।
ಕೀವು ದುರ್ಗಂಧ ಅಡವೇಶ ॥೨೭೮॥

ವಿಜ್ಞಾನಿ

ಎನಿತು ಭೋಗಿಸಲೇನು ಮಾನವಗೆ ಕೊನೆಯಿಲ್ಲ ।
ದಿನಿತು ಕಾರಣ ನಡೆದ ಸಂಶೋಧನೆಗೆ ।
ಕೊನೆಯಿಲ್ಲ ಮುಂಟು ಅಡವೇಶ ॥೨೭೯॥

ನಾ ಮುಂದೆ ನೀ ಹಿಂದೆ ಕಾಮಿಗಳ ಕಿರಚಾಟ ।
ತಾಮಸಿಕ ಬಾಂಬೆದುರುಬದಿರು ನಾಟ್ಯದೊಳು ।
ಯಮನೆ ಪ್ರೇಕ್ಷಕನು ಅಡವೇಶ ॥೨೮೦॥

ಉಳಿಸುವದೆ ವಿಜ್ಞಾನ ಸುಳಿದಾಡುವೀ ಪ್ರಾಣ ।
ಬಾಳು ಬದುಕಾಶೆ ಪುಳಗುಂಟು ವಿಜ್ಞಾನಿ ।
ಕಾಲ ಪ್ರತಿರೂಪಿ ಅಡವೇಶ ॥೨೮೧॥

ಸುಜ್ಞಾನಿ

ತಾನಾಗಿ ಬಂದುದನು ಮನ್ನಿಸುತ ಸ್ವೀಕರಿಸು ।
ತೇನೊಂದು ಯೋಚಿಸದೆ ಗತಿಪ ಸ್ಥಿತಿಜ್ಞ ವಿ ।
ಜ್ಞಾನಿಯೆನಲೇನು ಅಡವೇಶ ॥೨೮೨॥

ವರ್ಣ ವೈಖರಿಯಿಂದೆ ಕರ್ಣಸೂರತೆಯುಂಟೆ ।
ಕರ್ಣನವದಾನಿ ಧೀರ ನಿರಲವಗೆ ಸು ।
ಜ್ಞಾನಿವೆನಲಿಲ್ಲ ಆಡವೇಶ ॥೨೮೩॥

ಗಂಗೆ ಧರಿಸಿರಲವನು ಗಂಗಾಧರೆನಿಸಿದನು ;
ತುಂಗ ಸುಜ್ಞಾನ ಧರಿಸಿದವ ಸುಜ್ಞಾನಿ
ಯಂಗ ರಸಗಂಗೆ ಆಡವೇಶ ॥೨೮೪॥

ಸುಧೆಯುಮಯ ಸುಜ್ಞಾನಿ ಹೃದಯಸುಮ ಪರಿಮಳವ ।
ಸಾದರದಿ ತನ್ನ ಹೃದಯದೊಳು ಧರಿಸಿದನು ।
ಮಧುರ ನಿರುಪಾಧಿ ಆಡವೇಶ ॥೨೮೫॥

ಗಂಧವಿಲ್ಲದ ಕುಸುಮ ಹಂದಿ ಸಹ ಧರಿಸದದು ।
ಗಂಧ ಸುಜ್ಞಾನ ಧರಿಸಿದವ ಸುಜ್ಞಾನಿ ।
ಗಂಧ ಮಧು ಸಂಧಿ ಆಡವೇಶ ॥೨೮೬॥

ಹೊಳೆವ ನಿರುಪಾಧಿ ಮಧು ಫಲಿತ ಹೃದಯದಿ ಬೆರೆತು ।
ಬೆಳಗಿ ಚೈತನ್ಯಮಯನಾದ ಹೃದಯವೆ ಸು ।
ಶೀಲ ಸುಜ್ಞಾನಿ ಆಡವೇಶ ॥೨೮೭॥



## (೪)

# ಸ್ವತ್ತು ಸ್ವರ

### ದೇವ ದೈವ

ತೋರದೆಂದೆನಬೇಡ ತೋರುತಿಹುದಿದು ದೈವ ।
ಸುರಸ ಕಹಿ ನಿತ್ಯದನುಭವವೆ ತಿಳಿವೊಂದು ।
ಚರಣ ದೈವಾಂಗ ಅಡವೇಶ ॥೧॥

ನಂಬಿ ಮಧು ಮದುವೆಯನು ಶಂಭು ಕೆಡಿಸಿದನಿದನೆ ।
ನಂಬು ದೈವದದ ಹುಡುಗಾಟ ನಗೆಯಾಟ ।
ಹುಂಬ ಹಸನಾಗು ಅಡವೇಶ ॥೨॥

ಪದರು ಮನೆ ಪದರು ಮನ ಪದರು ಫಲ ಪದರು ಕುಲ ।
ಪದರು ತನು ಭೂಮಿ ಪದರಳಿಯಲಾ ಮೋದ ।
ಸದರ ಸುಖ ಸೊಂಪು ಅಡವೇಶ ॥೩॥

ದೇವತ್ವ ಮತಿ ನಿಜದ ದೈವಜೊತೆ ಬಾಳುತಿರು ।
ದಾವಾಗ್ನಿ ದೈವವಿರಲದನು ಹರಿದೊಗೆಯೊ ।
ರವಿಯಾದರೇನು ಅಡವೇಶ ॥೪॥

ದೇವ ದೈವದೊಲುಮೆ ಜೀವನದಿ ಸವಿಯಾಟ ।
ಈ ಮೆರಡು ಪ್ರತಿರೆ ಯಮಪಾಶ–ಮುಂದಿನದು ।
ದೆವ್ವ ಬಡಿದಂತೆ ಅಡವೇಶ ॥೫॥

### ಪುರ–ಪಂಚಾಯತ

ಪುರ ಮಾನ್ಯನಿಹೆನೆಂದು ಸೆರಗು ಸೆಳೆಯುದುವಲ್ಲ ।
ಪುರ ಬಡವರಿಂಗೆ ಕಾಟಕೊಡುವದು ವಲ್ಲ ।
ದಿರಿವೆ ಸಹಿಸದದು ಅಡವೇಶ ॥೬॥

ಪರಿಯರಿತು ಹಿರಿತನದಿ ನಿರ್ಣಯವ ನೀಡುತಿರು ।
ವರಧರ್ಮನಾಗಿ ಸರಿತೂಗು ತಕ್ಕಡಿಗೆ ।
ಸರಿಯನ್ವರಾರು ಅಡವೇಶ ॥೭॥

ಹಿರಿಯಬಾಗಲು ಕಿರಿಯ ಸರಿಯಾಗಿ ಬಾಗುವನು ।
ಭರಿತ ಜಲಕುಂಭ ಬಾಗಿರಲು ತಂಬಿಗೆಯು ।
ಭರನೆ ಜಲ ತೃಪ್ತಿ ಅಡವೇಶ ॥೮॥

ಕುರಿ ಬಾಗಿ ಗತಿವಿರಲು ವೈರಿ ಬಂದಿರಲಾಗ ।
ಕುರಿಕಾಯ್ವ ಹಿರಿಯ ರಕ್ಷಿಸುವತೆರದಂತೆ ।
ಹಿರಿಯ ಗುಣವಿರಲಿ ಅಡವೇಶ ॥೯॥

ಸಮಯರಿತು ಗತಿಪನರ ನಮಿತ ಕೃತಿ ಸಾಧಿಸುವ ।
ನಮಿತ ನಡೆ ತಡೆಗಳೊದಗಿರಲು ಸ್ಥಿರಮನುಜ ।
ಭೀಮನಾಗುವನು ಅಡವೇಶ ॥೧೦॥

ಕೆಲ ಕಡೆಗೆ ಪಂಚಾಯ್ತಿಗಳ ರೂಪು ಪಂಜೀತಿ ।
ಗಳಾಗಿರೆ ಕೆಲವು ರಸವಿಲಾಸದಿ ನಿತ್ಯ ।
ಜೋಲಿ ಹೊಡೆಯುತಿವೆ ಅಡವೇಶ ॥೧೧॥

ವಿದರಿಂದ ಕೆಲವು ಪುರ ಮಧುರ ಹೊಗೆಯಿಂ ಪೂರ್ಣ ।
ರಿದರಿಂದ ಕೆಲವು ಪುರದೊಳಗೆ ಪಕ್ಷಗಳು ।
ಶಿರ ಛೇದನಾಟ ಅಡವೇಶ ॥೧೨॥

ಗೂಢತೆಯ ಯಮಧರ್ಮ ಗೌಡಕಿಯುವಿರಬೇಕು ।
ನಾಡೆ ಸುವಿಚಾರ ಹೊಂದಿರದೆ ವಿಮುಖವಿರೆ ।
ಪಾಡುಗೊಳಲಂತೆ ಅಡವೇಶ ॥೧೩॥

ಪಂಚರಾದವರೆಲ್ಲ ಪಂಚಮುಖದನ ತತ್ವ ।
ವಂಚನಿರದಾದರಿಸಿ ಸಾಗುವದು ಬರಿಯ ।
ಕೆಂಚತನವಲ್ಲ ಅಡವೇಶ ॥೧೪॥

ರಂಡೆವಿಟ್ಟಿಹ ಪಂಚರುಂಡಿಹರು ಗತಿಹಂಚ ।
ತುಂಡಾದುದಂತೆ ಕುಂಟಾಟ ಕುಂಡಿರದ ।
ಗಿಂಡಿಯಂತಾಟ ಅಡವೇಶ ॥೧೫॥

ಮಾದಕ ಮದಾಂಧತೆಯ ಸಾಧು ಸರಪಂಚರಿಂ ।
ಮಾದಿಗರು ಲೇಸು ಆದರದ ಪದ್ಧತಿಡೆ ।
ವೇದ ಪುರುಷವರು ಅಡವೇಶ ॥೧೬॥

ಬಡವ ಶ್ರೀಮಂತರಿಂ ಪಡೆದ ಹಿರಿತನದ ಬಲದಿ ।
ಪಡೆದು ಬಹುನೋಟು ವಿಷಯಾಟದೂಟದಿಂ ।
ಕಡೆಗೆ ಯಮನೋಟ ಅಡವೇಶ ॥೧೭॥

## ಪ್ರಾಧ್ಯಾಪಕ–ಛಾತ್ರ

ಆಧ್ಯಾತ್ಮಿಕನುಭವದಿ ಪ್ರಾಧ್ಯಾಪಕರು ವಿರಲ್ ।
ವಿದ್ಯಾರ್ಥಿ ಕುಲಕೆ ಗಾಳಿಯದು ತಾಗಲ್ಕೆ ।
ವಿದ್ಯಮಾನವದು ಅಡವೇಶ ॥೧೮॥

ಗುರು ಧರ್ಮವರಿತು ಶಿಷ್ಯರಿಗೆ ಕಲಿಸುವಾ ಗುರು ।
ನರನೆನ್ನ ಬೇಡ ಮೇಣ ಮೂರ್ತಿಯುವಲ್ಲ ।
ಗುರು ಧರ್ಮ ಬದ್ಧ ಅಡವೇಶ ॥೧೯॥

ಮಾವನಿರೆಯಾರಿರಲಿ–ಸವಿಯಲ್ಕೆ ಬಾಧೇನು ।
ಸವಿಯರಿತ ಪಾರ್ಥ ಚನ್‌ಬಸವ–ಶಾಂ–ಬಸವ ।
ಮಾವರಡಿಯಲ್ವೆ ಅಡವೇಶ ॥೨೦॥

ಅಧ್ಯಯನ ತನಗಿರದ ಅಧ್ಯಾಪನೆಂತುಂಟು ।
ಶುದ್ಧ ಸತ್ವದಲಿ ನೀ ನಡೆದು ನಡೆಸುತಿಹ ।
ಅಧ್ಯಾಪಕನಿರಲಿ ಅಡವೇಶ ॥೨೧॥

ಬಣ್ಣ ವೇಶ್ಯೆಯ ಬಂಧದನ್ಯ ಕಾಮಿಣಿ ಬಂಧ ।
ದನ್ಯತಿಸ್ಪೇಟು ಸುರೆಗುರುವ ಮನ್ನಿಸಿರೆ ।
ಹುಣ್ಣಾಗುದೆತ್ತ ಅಡವೇಶ ॥೨೨॥

ಧನಲಕ್ಷ್ಯವಿಡುವ ಗುರು ಧನತುಡುಗಿ ಮಡದಿಯಳು ।
ಮನೆಯಳಿದ ಗಂಡ ಸದ್ಗುಣಿರದಿಹ ಸ್ವಾಮಿ ।
ಹೇಸುವೆನಬೇಕು ಅಡವೇಶ ॥೨೩॥

ಎಲ್ಲಿದೋ ಬೀಜದ್ಯಾವಲ್ಲಿಯೋ ಗಿಡದೊಳಗೆ ।
ಬಲಿತು ಬೆಳೆಯುದಕೆಯಾಶ್ರವನಿತ್ತಂತೆ ।
ಸಲ್ಲಿಸೋ ಸೇವೆ ಅಡವೇಶ ॥೨೪॥

ಗುರು ಪೂರ್ವರೂಪದುತ್ತರ ರೂಪಿ ಶಿಷ್ಯನಿರೆ ।
ರೀರ್ವರಿಗೆ ವಿದ್ಯೆಸತಿ-ಮತಿ ಸಂಧಾನ ।
ಗುರಿಯರಿತು ಕಲಿಸು ಅಡವೇಶ ॥೨೫॥

ನೇತ್ರ ಬಿಂದುವಿನೊಳಗೆ ಚಿತ್ರನಭದೋರಂತೆ ।
ಸೂತ್ರ ಸಿದ್ಧಾಂತ ಪರಮಾತ್ಮನಿರುವಿಕೆಯ ।
ಛಾತ್ರ, ನೀನಾಗು ಅಡವೇಶ ॥೨೬॥

ಹಿರಿ ಕಿರಿಯರಾರಿರಲಿಯರಿಸಿದವ ಗುರುವಹನು ।
ನಾರದನರಿತಾ ಬಾಲನಿಂ ಪರವಿದ್ಯೆ ।
ಯರಿತು ಸುಖಿಯಾದ ಅಡವೇಶ ॥೨೭॥

ಓದುವಿರದಿರೆ ಬಾಧೆ ಹಾದಿಹಿಡಿದಾಗಯ್ಯ ।
ಕಾದು ಕುಳಿತಿರುವ ಪರೀಕ್ಷೆಯ ನಿರೀಕ್ಷೆಯು ।
ಕಾದು ನೋಡಯ್ಯ ಅಡವೇಶ ॥೨೮॥

ಗುರು ಬಡಿಯಲೇನಾಯ್ತು ಚಿರಮತಿಯ ಸುರಿಸುವನು ।
ಸರಿತಾಯಿ ಸುತನ ಬಡಿದು ಕರೆದಪ್ಪಿ ಮೊಲೆ ।
ಮರೆಯೊಳುಣಿಸುವಳು ಅಡವೇಶ ॥೨೯॥

ಕಲಿಯುತಿಸ್ಪೇಟು ಸುರೆ ಲಲಿತೆ ನೇಹದಿ ಬಂಧ ।
ಕೊಳೆತ ಛಾತ್ರರರು ನಿಜಕಲೆಯ ಕಲಿಯದದ ।
ಸಾಲು ಮಿತಿಯಿಲ್ಲ ಅಡವೇಶ ॥೩೦॥

ಎಲ್ಲರವರಿ ಇಲ್ಲದಲ್ಲಲ್ಲಿ ಬಲ್ಲಿದರ ।
ಬಳ್ಳಿಗಳ ತೂರು ಕಳ್ಳಗಾಳುಗಳೆಷ್ಟೊ ।
ಜೊಳ್ಳೆಷ್ಟೊ ಹರಳು ಅಡವೇಶ ||೩೧||

ಪೆನ್ನು ಹಿಡಿದಾಗೆನ್ನ ಗೊನ್ನೆ ಸಿಡಿದಿತ್ತಯ್ಯ ।
ವಿನ್ನು ಸಹನೆಸವು ಬರನೆತ್ತಿ ಪೆನ್ನು ಬವಿ ।
ಹೆಣ್ಣು ವೀಗಯ್ಯ ಅಡವೇಶ ||೩೨||

ತಾನುಣುವದನ್ನವನುವೆನಗುಣಿಸಿ ದಿನ ಶಾಲೆ ।
ಮನೆಯೊಳಗೆ ಪಾಠ ಹೇಳಿರುವ ಗುರುಮೂರ್ತಿ ।
ಮನದಿ ನೆಲಿಸಿಹನು ಅಡವೇಶ ||೩೩||

ಶಾಲೆ ಕೀಲಿಯೊಳುಂಟು ಶೀಲೆಬದಿಯುವನುಂಟು
ಹಾಲುವಿರುವಾಗ ಶಾಲೆ ಬಾಲಕರುಂಟು ।
ಕಾಲ ಹೀಗುಂಟು ಅಡವೇಶ ||೩೪||

ಅಧಿಕಾರ–ವಿಕಾರ

ಕೀಳು ಕ್ರಿಮಿ ಮೇಲೇರಿ ಮಾಲೆ ಧರಿಸಿರಲೇನು ।
ಕಾಲಬಂದಾಗ ಮಲಕಂಡ ಹಂದಿಗಳು ।
ಮೇಲಿಂದ ಕೆಳಗೆ ಅಡವೇಶ ||೩೫||

ಕೀಳು ಕ್ರಿಮಿವಿರಲೇನು ಶೀಲತನ ತಿಳಿಯೆ ಸುಮ ।
ಮಾಲೆ ಹರಿಯದದು ಶೀಲಾಪಮಾನವಿರೆ ।
ಮೂಲ ಸಹದಳಿವು ಅಡವೇಶ ||೩೬||

ಇದುವೊಂದು ನಾಟಕವು ಬುಧಕೆಳಗೆ ಇಲಿಮೇಲೆ ।
ಮದದಿ ಕಚ್ಚುತಿರೆ ಮದ ವೈರಿ ಬಂದಾಗ ।
ಒದವಿ ಬುಧಪಾಠ ಅಡವೇಶ ||೩೭||

ಅಧಿಕಾರಿಗಳ ಮುಂದೆ ಮಿದುವಾಗಿ ಗತಿವಿರಲಿ ।
ಮದಗಮನವಿರಲು ಪಂಜರದ ಪಶುಪಾತ್ರ ।
ವೊದಗುವದು ಕಂಡ ಅಡವೇಶ ||೩೮||

ಉನ್ನತದ ಶಿಖರೇರಿ ಹೊನ್ನು ತಿನ್ನುದಕ್ಕಿಂತ ।
ಸಣ್ಣ ಪೀಠದೊಳುರುತ ಸಾತ್ವಿಕ ಫಲ ।
ದನ್ನವದು ಲೇಸು ಅಡವೇಶ ॥೩೯॥

ರಾಷ್ಟ್ರನಾಯಕರಿರಲಿ ಸ್ಪಷ್ಟಕೃತಿ ಕಲ್ಯಾಣ ;
ಕಷ್ಟ ಭ್ರಷ್ಟತನ ಕಳೆಯುತಲಿ ಧರ್ಮಾತ್ಮ ।
ಶ್ರೇಷ್ಠವಿದನಾಗು ಅಡವೇಶ ॥೪೦॥

ದುರುಳ ಸ್ತ್ರೀ ಹಿರಿತನದವಿರುವ ಮನೆ–ಹರಿದ ಪಟ।
ಉರಿಯುತಳಿವಂತೆ ಕಣ ಹಾರಿ ಹೋದಂತೆ ।
ಕಾರಿಕೊಂಡಂತೆ ಅಡವೇಶ ॥೪೧॥

ಸತ್ಕೃತಿಗೆ ವ್ಯಾಖ್ಯಾನದೆತ್ತಲೋ ಸ್ವರವಿಹುದು ।
ದುಷ್ಕೃತಿಗೆ ನಿತ್ಯದಧಿಕಾರ ಲಾಲಸಕೆ ।
ತೀಕ್ಷ್ಣ ಸರ್ವತ್ರ ಅಡವೇಶ ॥೪೨॥

ಅಧಿಕಾರ ಬಲದಲ್ಲಿ ಸುಧರ್ಮ ಸ್ಥಾನದಲಿ ।
ಮದದಿ ಕೈವಾಡ ಸರಿಯಲ್ಲ ವಿದುಕೃತ್ಯ ।
ಪದಕಡಿದ ಪುರುಷ ಅಡವೇಶ ॥೪೩॥

ಆಧ್ಯಾತ್ಮವನು ಮರೆತು ಸಾಧಿಸಿದ ಸತ್ತೆಯದು ।
ಭೇದಿ ಪರಿಣಾಮದಿಂದ ನರ ಮರಣದೆಡೆ !
ಮೂದಲಿಸಿದಂತೆ ಅಡವೇಶ ॥೪೪॥

ಚಿವ್ರಗುಣ ಕೃತಿಕೀಳು ಸದ್ದಿರದೆವೆಸಗುವವ ।
ಸೂದ್ರನಂ ತಿಳಿಯೊವೆಲ್ಲೆಡೆಗೆ ವೀ ಗುಣದ ।
ಭದ್ರ ಚಲ್ಲಾಟ ಅಡವೇಶ ॥೪೫॥

## ರಾಜತಂತ್ರ–ಧರ್ಮ

ಮೇಲೊಂದು ಪಕ್ಷ ಮತಿಯೊಳಗೊಂದು ಪಕ್ಷ ಕೃತಿ ।
ಸೀಳು ನಾಲಿಗೆಯ ರಾಜ್ಯ ತಾಂತ್ರಿಕದಾಟ ।
ಗೋಳು ದಿನದಿನಕೆ ಅಡವೇಶ ॥೪೬॥

ಬರಿದೆಯಾಶ್ವಾಸನೆಗೆ ಗುರಿಮುಟ್ಟಲಾರದದು ।
ಸಿರಿ ಸ್ವಾರ್ಥ ಭರಿತ ರಹಿತ ಪಕ್ಷವುದದು ।
ವಿರಿಸೊ ಮತಿಯೋಟು ಅಡವೇಶ ॥೪೭॥

ರಾಜಕಾರಣಿ ಧರ್ಮ ಧ್ವಜವಿಡಿದು ಸಾಗಿದರೆ ।
ಓಜವನ ಖ್ಯಾತಿ ಬಸವ ತತ್ವಳಿದವನ ।
ಬೀಜುಳಿಯುದುಂಟೆ ಅಡವೇಶ ॥೪೮॥

ಧರ್ಮದರ್ಶಿಯು ರಾಜಕಾರಣದಿ ಸೇರಲ್ಕೆ ।
ಚಾರಿತ್ರ್ಯಕಾವ ಬಾಧೆಗಳು ಮುನ್ನ-ಸುವಿ ।
ಚಾರಿಸಲು ತಿಳಿವು ಅಡವೇಶ ॥೪೯॥

ಬಸವ ವಿದ್ಯಾರಣ್ಯ ಹೊಸಯುಕ್ತಿ ಚಾಣಕ್ಯ ।
ದೆಸೆವ ರಾಂದಾಸ ರಾಜಧರ್ಮದೊಳಿರಲು ।
ಹೊಸತುದಯಾಯ್ತು ಅಡವೇಶ ॥೫೦॥

ಜ್ಞಾನಿ ವಿದ್ಯಾರಣ್ಯ-ಮನನೀಯದುಲ್ಲೇಖ ।
ಜ್ಞಾನಿನಾಚರಿತುವು ಶಖ್ಯಂ-ರಾಜ್ಯಾದಿ ।
ವೆಸುವ ಮಣಿ ಧರಿಸೊ ಅಡವೇಶ ॥೫೧॥

ರಾಜಕಾರಣದಿ ಪ್ರವ್ರಾಜ ರಾಜಿಸುತಿರಲಿ ।
ನೈಜವೈರಾಗ್ಯ ಸುವಿಚಾರಿಯಾಗಿಹನು ।
ವಿಜಯ ತಂತ್ರಜ್ಞ ಅಡವೇಶ ॥೫೨॥

ಎಣಿಕಿರದ ಪಕ್ಷಗಳು ಡೆಣಿಕಿರದ ಘೋಷಣೆಯ ।
ಗಾಣದೊಳು ಬಂಧ ಬಹುವರ್ಣ ಮತ್ಸ್ಯಗಳು ।
ವಾನು ನಿರ್ಬಂಧ ಅಡವೇಶ ॥೫೩॥

ವ ತಿತಂತ್ರ ಬಲದಿಂದ ಪ್ರತಿಪಕ್ಷಗಳ ಬಂಧ ।
ಸೋತು ಹೋಗದಿರು ನಿಸ್ವಾರ್ಥಿಯಾಗುತಿರು ।
ನೀತಿಯಿಂದಿರೋ ಅಡವೇಶ ॥೫೪॥

ಜನರಭಿಪ್ರಾಯೊಂದೆ ಮನ್ನಿಪುದು ಧರ್ಮವಲ್ಲ ।
ದೆನಿತಃ ಸ್ವಬುದ್ಧಿಯೋಡಿಸದ ಬಿಜ್ಜಳನು
ಪ್ರಾಣ ಕಳಕೊಂಡ ಆಡವೇಶ ।೫೫॥

ಗಂಜಿಯನು ಬಿಡಬೇಡ ನಂಜಿ ಹೋಗಲು ಬೇಡ ।
ರಂಜನಾಸೆಯಲಿ ಪಕ್ಷಾಂತರಂ ಬೇಡ ।
ನಂಜಾಗುದೊಮ್ಮೆ ಆಡವೇಶ ॥೫೬॥

ಸರಿದು ತಾ ಓಡಿದರೆ ಬರುತಿಹನು ಮತ್ತೊರ್ವ ।
ಸುರುಚಿ ಸತಿಯನ್ನು ಸರಿಸಿ ಹೋಗುವರೇನು ।
ಸರಿಯಲೇನಾಯ್ತು ? ಆಡವೇಶ ॥೫೭॥

ಧರ್ಮಕ್ಕೆ ಪ್ರಾಧಾನ್ಯ ಸೋಮಧರ ಮತ ರಾಜ್ಯ ।
ನಾಮ ಪ್ರಖ್ಯಾತವಂದುವಿರೆ ಬರಿಸ್ಮರಣ ।
ವಿಮುಖದಳವಿಂದು ಆಡವೇಶ ॥೫೮॥

ಸೇದು ಹಗ್ಗವ ಬಿಟ್ಟು ಸೇದುವದು ಎಂತು ಜಲ ।
ಶೋಧಿಸಿದ ಧರ್ಮ ಮರೆತು ನಾಡಾಳುವದು ।
ಬೀದಿರತಿಕೂಟ ಆಡವೇಶ ॥೫೯॥

ರಾಜಗುರುವಪ್ಪಣೆಯೆ ರಾಜನಾಡಳಿತಂದು ;
ಈ ಜನಾಡಳಿತ ಸರಿಯುಂಟೆ ! ಪ್ರತ್ಯಕ್ಷ ।
ಹಾಜರಿರೆ ಚಿತ್ರ ಆಡವೇಶ ॥೬೦॥

ಆಡಳಿತ

ಆಡಳಿತ ನಡೆಸುವದು ಆಡುಕಾಯ್ದಂತಲ್ಲ ।
ಕೂಡಿದಾಡಳಿತ ಒಡಕೊಮ್ಮೆ—ಏಕ ಪ ।
ಕ್ಷಾಡಳಿತವಿರಲಿ ಆಡವೇಶ ॥೬೧॥

ನುಡಿಯು ಜಾತ್ಯಾತೀತ ಕಡೆಹಿಡಿವ ಗುರುತೇನು ।
ಒಡೆಯನಾದ್ಮೇಲೆ ತನ್ನೊಡಲ ಜಾತಿಯಲಿ ।
ಕುಡಿಸಿ ಹಾಲ್ಗಡಲು ಆಡವೇಶ ॥೬೨॥

ಭ್ರಾಂತಿಯೊಡಳಿತವಿರೆ ಕ್ರಾಂತಿಯಾಗಲು ಬೇಕು ।
ಕ್ರಾಂತಿ ನಡೆದಿರಲು ಭ್ರಾಂತರಾಡಳಿತ ತಿಳಿ ।
ಕ್ರಾಂತಿಯಿಂ ಶಾಂತಿ ಅಡವೇಶ ॥೬೩॥

ಪೂರ್ವಪದ ತಿದ್ದುಪಡಿ ಸರ್ವಾಧಿಕಾರ-ನುಡಿ ।
ಸರ್ವಾಧಿಕಾರದಾ ಬಣ್ಣ ಜನದಡಿ ।
ಜೀವಿಗಳ-ನುಡಿಯು ಅಡವೇಶ ॥೬೪॥

ವರ ಧೈರ್ಯ ಗಾಂಭೀರ್ಯ ಪುರುಷ ಮಂತ್ರಿಯು ಯೋಗ್ಯ ।
ನರಿಯೊಡೆಯ ಸಿಂಗ ವನರಾಜನಲ್ಲಡೇ ।
ಕುರಿಯಾಗಬಹುದೆ ಅಡವೇಶ ॥೬೫॥

ಸಾಮ್ರಾಜ್ಯವಾದಿಗಳ ಸರ್ವಾಧಿಕಾರಿಗಳ ।
ಕಾಮದಹನಾಂಗ ಪುಟಕಂಡು ತಿದ್ದಿಕೋ ।
ಸರ್ವಾಧಿಕಾರಿ ಅಡವೇಶ ॥೬೬॥

ಬಿಡೆಯಿಡದಧಿಕಾರಿಯೊಡೆಯ ನಿಜನೆನಬೇಕು ।
ಬಿಡೆಗೆ ಸತಿಯನ್ನು ಬಲಿಕೊಡುವರೇನು ।
ಬಿಡೆದೂಡಿರೆಲ್ಲ ಅಡವೇಶ ॥೬೭॥

ಬಿಡೆ ಬಂಧನರಗಿಂತ ಸುಡುಗಾಡು ಲೇಸುಂಟು ।
ಬಿಡೆಯಿಡದ ಕಡಲು ತನ್ನ ಸ್ಥಿತಿಯೊಳಿರಲು ।
ಕಡಿಮೆಯೇನದಕೆ ಅಡವೇಶ ॥೬೮॥

ಬರಲೆನಿತು ಮಹಪೂರ ವಿರಲೆನಿತು-ಝುರಿಯೆನಿತು ।
ಹರಿಯುತೆ ಸಮಾನ ಸ್ಥಿತಿಯೆ ತಟ ಸಂಬಂಧ ।
ವಿರಲಿ ಮಂತ್ರಿಗಳು ಅಡವೇಶ ॥೬೯॥

ನಾಗ ನಂಬಿಗೆ ಲೇಸು ನಗುಮುಖಿಯ ನಂಬದಿರು ।
ನಗುಮುಖದ ಸೋಗು ನಾಗವಿಷದಿಂ ಘೋರ ।
ಬಾಗದಿರು-ಮುಖಕೆ ಅಡವೇಶ ॥೭೦॥

ಎಚ್ಚರಿಪ ಕೂಗಿಂಗೆ ಹಚ್ಚುವರು ಮುಃಖಕೆ ಧನ ।
ಹಚ್ಚಿಕೊಳ್ಳದಯೆ ಉತ್ತಿಷ್ಠತ-ಜಾಗ್ರತ ।
ಕೆಚ್ಚುನುಡಿ ಬಿಡದು ಅಡವೇಶ ॥೭೧॥

ಕದಲಬಿದಲ ಕಂಚಾನ್‌ವಿದ ಬಿಟ್ಟ ಇವರ್‍ಯಾರ್ ।
ವಿದರಂತೆಯಾಟ ದಿನಕೊಂದು ಪಾಠ ನರ ।
ಬೆದರಿ-ಕುರಿಯೋಟ ಅಡವೇಶ ॥೭೨॥

ಗುಡುಗುಡೂ ಚಾಣಕ್ಕಿವಿಡಬೇಕೆನೋ ಕೊಂ ।
ಡಕಿ ಹಬ್‌ಕೊಂದ ಗಬ್ಬಗುರಿ-ಯಾಕೊಲ್ಲೆ ।
ಕೊಡಲೊಲ್ಲೆ-ಬಿಲ್ಲೆ ಅಡವೇಶ ॥೭೩॥

ತಾಮಸಿಕ ಜೀವಿಗಳು ರಾಮಮತಿ ಧರಿಸದಿರೆ ।
ಸೋಮ ಸಮೃದ್ಧ ರಾಷ್ಟ್ರಧೂಳೇಳುವದು ।
ಶಮ-ಮಂತ್ರಿವಿರಲಿ ಅಡವೇಶ ॥೭೪॥

ತನ್ನ ಸುಖ ನೋಡದಯೆ ಚನ್ನೆಯಳರಾಂ ತೊರೆದ ।
ನಿನ್ನು ಪ್ರಜೆಗಾಗಿ ತೊರೆದ ಮಂತ್ರಿಗಳಿಹರೆ ।
ಚಿನ್ನಾದಿ ಮಾತ್ರ-ಅಡವೇಶ ॥೭೫॥

ಧರಮ ನರನಾಡಳಿತ ಉರಿಗೆ ಜಲಸುರಿದಂತೆ ।
ಧರ್ಮಳಿದ ಜೀವಿಯಾಡಳಿತ ಜಗದೊಳಗೆ ।
ಹೊರಗೊಳಗು ಬೆಂಕಿ ಅಡವೇಶ ॥೭೬॥

## ಸಮಾಜವಾದ-ವಿವಾದ

ಉಳ್ಳರುಜೆಯುಳಿದು ಸುಖಿಯೆಲ್ಲರಾಗಲಿ ದುಃಖ ।
ವಿಲ್ಲದ ಸುಮಂಗಲಾಗಿರಲಿವೆನು ಸೂಕ್ತಿ ।
ಬಲ್ಲ ಮುನಿಯಿಂದ ಅಡವೇಶ ॥೭೭॥

ಇದು ಸಮಾಜವಾದ ವಿವಾದನೆಬ್ಬಿಸುತಿಂದು ।
ಹಾದಿ ಕೆಲರಿಂಗೆ ಸುಧೆಯಹುದು ಘನಸಿಡಿಲು ।
ಹಾದಂತೆ ಕೆಲಗೆ ಅಡವೇಶ ॥೭೮॥

ಹೊಸತುವೇನಿಲ್ಲವಿದು ಬಸವನಿಂ ಕೃತಿಯೊಳಗೆ ।
ವೆಸೆದ ಬೀಜಂತು ವೊಳಕೆ ಕಾಣಿಸಲಾಗ ।
ಕುಸುಮುವೆಂದುದಯ ಅಡವೇಶ ||೭೯||

ವಾದವಾವುದೆವಿರಲಿ ಆದರಿಸಲದು ಧರ್ಮ ।
ಬಾಧಿಸದೆ ವಿರಲಿ ವಿದಕೆ ಪ್ರತಿಸಾಗಲಾ ।
ಹಾದರದ ಸಂತಿ ಅಡವೇಶ ||೮೦||

ಬರಿ ಜಾತಿಯಂ ಧರ್ಮನರಿಯುವವ ಮೂಢನಂ ।
ದುರಿತ ಕೃತಿ ಪ್ರಕಟೆ ಪಡಿಸುವದೆ ನಿಷ್ಪಕ್ಷ ।
ಪತ್ರಿಕೆಯ ಧರ್ಮ ಅಡವೇಶ ||೮೧||

ಇಂದು ಹೊಲಮನೆ ಕೊಡಲು ಮುಂದೆ ಮೆಲ್ಲಗೆ ಜೀವಿ ।
ಒಂದೊಂದದಾಸೆವಿಡಬಹುದು ಯೋಚಿಸುತೆ ।
ಮುಂದಿಡುತಸಾಗೊ ಅಡವೇಶ ||೮೨||

ಬಡತನದ ಪರಿಹರವು ಮೃಡಧರ್ಮ ಕಾಯಕದಿ ।
ಕಡು ಸಾಧ್ಯವೆನ್ನಿ ಘೋಷಣೆಗಳಿಂದಲ್ಲ ।
ದೃಡ ಬಸವನುಡಿ ಅಡವೇಶ ||೮೩||

ಕೊಡುಗೆಗಳು ಮಾನವರ ಮಾಡುವವು ಸೋಮಾರಿ ।
ಹೇಡಿ ಬೇಡಿಕೆಯ ಪೂರ್ತಿಸುವ ಪೂರ್ವದಲಿ ।
ಬಿಡು ಬಿಡಿಸು ಸ್ವಾರ್ಥ ಅಡವೇಶ ||೮೪||

ಬೇಕೆನ್ನುವವ ಬಡವ ಸಾಕೆನ್ನುವವ ಸಿರಿವಂತ ।
ಲೋಕಲೋಕದ ಭೋಗಾಸೆ ಬಡವರರು ।
ಲೋಕ ತುಂಬೆಲ್ಲ ಅಡವೇಶ ||೮೫||

ಸಿಡಿದು ಬರುತಿಹುದಿತ್ತ ಬಡಭೂತರೆಡೆಯತ್ತ ।
ಕಡಲುಗಿರಿದಾಟಿ ಸಿರಿಮನೆಗೆ ಸಿರಿಮುದ್ದು ।
ವಿಡುತ ವಿಡುವೆನುತ ಅಡವೇಶ ||೮೬||

ಜಡಚೇತನಾಂಶದೊಳು ಗುಡುಗು ಧ್ವನಿ ಕ್ಷಣಕ್ಷಣಕೆ ।
ಕುಡಿವಜಲದನ್ನ ಸರ್ವರೋಳ್ ಒಂದೆಂದೋ ।
ಮೂಡುತಿಹುದಂದು ಅಡವೇಶ ॥೮೭॥

**…ತುರ್ಥ ಪರಿಸ್ಥಿತಿ**

ತುಂಬಿದುದು ಚೆಲ್ಲುವದು ಶಂಭುಸೃಷ್ಟಿಯ ಧರ್ಮ ।
ಹಂಬಲದಿ ವಿದರ ಪ್ರತಿಸಾಗಲಾ ಗರ್ಭ ।
ತುಂಬಿದಂತಿಹುದೆ ಅಡವೇಶ ॥೮೮॥

ವಿದನರಿಯುದಾ ಜೀವಿಯುದು ದುನ ಮಾಡದಯೆ ।
ಕುಧನ ಮುಚ್ಚಿರಲು ತುರ್ಥಪರಿಸ್ಥಿತಿಯು ।
ಒದಗಲಾ ಗೋಳು ಅಡವೇಶ ॥೮೯॥

ಒಂದು ಕಣ ಸೂಚಿಸುತೆದಿಂದಿನಾ ಪರಿಸ್ಥಿತಿಯೆ ।
ಬಂಧಿಸಿದ ಸೂತ್ರ ದುಡಿದುಣ್ಣು ಪಡೆಯಣ್ಣ ।
ನೆಂದ ಬಸವನುಡಿ ಅಡವೇಶ ॥೯೦॥

ಕಿರ್ರಾನೆ ಜಿಗಿದಾಟ ಸಿರಿನರರ ಕಿರಚಾಟ ।
ಸಿರಿಹೀನನಾಟ ಹುಡುಗ್ಗಾಟದ್ಹಾಂಗ್ ಆಯ್ತು ।
ಕುರಿದಡ್ಡಿ ಬಂಧ ಅಡವೇಶ ॥೯೧॥

ಭೂಮಿ ಮಿತಿ ಕಾಯ್ದೆಗಳು–ಸೀಮಿತವಿರಲೆಂಬ ।
ನೇಮ ಘೋಷಿಸಲು ಕುದಿಯತೊಡಗಿತು ಹೊಟ್ಟೆ ।
ಶ್ರೀಮಂತರ ಭಟ್ಟಿ ಅಡವೇಶ ॥೯೨॥

ಪರಿಸ್ಥಿತಿಯು ನೆವದೊಳಗೆ ದುರಿತ ಕೃತಿ ಸಲ್ಲದದು ।
ಪರಮಧರ್ಮದಲಿಯಾಡಳಿತ ಕೈವಾಡ ।
ಸರಿಯಲ್ಲ ನೋಡು ಅಡವೇಶ ॥೯೩॥

**…ರಣ ತತ್ವರಿಸು**

ಸೋಮಾರಿ ಮಾರಪ್ರಿಯ ಸೋಮಧರ ಹೊಲೆರೂಪಿ !
ಸೋಮಧರ ನಲ್ವೆ ಪೊಲೆಯುನವನೆಂತು ಸ ।
ದ್ಧರ್ಮಿ ನಿಜವಿರಲು ಅಡವೇಶ ॥೯೪॥

ಶ್ರೇಷ್ಠ ಸಿಂಹಾಸನದಿ ಕೂಡ್ರಿಸಿರೆಯುಳಿಯುವವರೊ ।
ನಿಟ್ಟಹುದ ಹೆಸರು ಸಚ್ಚರಿತ್ರದಿ ಹೊಲೆಯು ।
ಶ್ರೇಷ್ಠನಾಗುವನು ಅಡವೇಶ ॥೯೫॥

ಹರಳಯ್ಯ ಕಕ್ಕಯ್ಯ ತಿರುನಾಳ್ಯೆ ಪುರಾತನ ।
ಚರಿತೆ ಪುಟ ಚಿತ್ರ ಶಿವಭಾವ ಸೇವೆಯಿಂ ।
ಶರಣರೆಣಿಸಿದರು ಅಡವೇಶ ॥೯೬॥

ಕರೆದು ಪದಕೊಡು ಪೂರ್ವ ಶರಣ ತತ್ಪರಿಸಯ್ಯ ।
ವರಿಸದಾ ವಧುವು ಸರಸ ಸತಿವೆಂತಯ್ಯ ।
ನರಿಸು ಸುವಿಚಾರ ಅಡವೇಶ ॥೯೭॥

ಕೀಳಂಗೆಯಧಿಕಾರ ಸಲ್ಲಿಸುವ ಪೂರ್ವದಲಿ ।
ತಿಳಿಸೊ ತತ್ವಾಂಗ ತಿಳಿಸದಲೆ ನೀಡಿದರೆ ।
ಕಲಶ ಒಡೆದಂತೆ ಅಡವೇಶ ॥೯೮॥

## ಸ್ತ್ರೀ ಸ್ವಾತಂತ್ರ್ಯ

ಬಳು ಪಕ್ಷಿ ಪಾತ್ರ ಸ್ತ್ರೀ ಸುಳಿಯುವಾ ಮನೆ ಮಠವು ।
ಹಾಳಾಗುದಯ್ಯ ವರ್ಷದೊಳುವಿಲ್ಲದಿರೆ ।
ಗೋಳು ವನವಾಸ ಅಡವೇಶ ॥೯೯॥

ಗಂಡರಾಮಿಯು ಜೊತೆಗೆ ಗಂಡಸನ ಒದರಾಟ ।
ಹೆಂಡಿಯೊಳಗೊಂದು ಕಲ್ಲೆಸೆಯಲಾ ಮುಖಕೆ ।
ಗುಂಡು ಸಿಡಿದಂತೆ ಅಡಿವೇಶ ॥೧೦೦॥

ಮುಂಡ ಧರ ಮತ ಮಠದಿ ಗಂಡುರಾಮಿಗಳು ಮೇಣ್ ।
ರಂಡೆ ರಾಗಿಣಿಯರುಂಡು ಹಿರಿತನದೊಳಿರೆ ।
ಮುಂಡ ಚಲ್ಲಾಟ ಅಡವೇಶ ॥೧೦೧॥

ಕೊಳ್ಳಬುದುವೇನೆಲ್ಲ ಕೊಳ್ಳದದು ಸಾನಂದ ।
ಕಳ್ಳಿಯುಪಚಾರ ಮಾಡುವವ ಮಳ್ಳಹನು ।
ಕಳ್ಳಿ ಹಾಲ್ಗಳ್ಳಿ ಅಡವೇಶ ॥೧೦೨॥

ನರ ಕೃತಿಯು ಮೇಲುಕೃತಿ ನಾರಿಮಾಡಲು ಬಹುದು ।
ನರನಾರಿಗೊಂದು ಪದ್ಧತಿಯು ನಿಯಮಗಳು ।
ವಿರಲು ಬಿಡು ಭ್ರಾಂತಿ ಅಡವೇಶ ॥೧೦೩॥

ನಾರಿಯೊಳು ನರಹೃದಯ ನರರೊಳಗೆ ನಾರಿಯು ।
ತ್ತರ ಕುಮಾರನು ಬೃಹನ್ನಳೆ ಸಾಕ್ಷಿತ್ವ ।
ಶೂರೆ ಶೈಲಜಾ ಅಡವೇಶ ॥೧೦೪॥

ತಾಮಸಿಕ ಪ್ರತಿಬಂಧ ವೀ ಮನುಜ ಕುಲಗುಂಟು ।
ನೇಮ ಸಂಸ್ಕೃತಿಯುನರಿಯಲ್ಕೆ ಸ್ವಾತಂತ್ರ್ಯ ।
ಪಾಮೆ ಕುಲಗರಲಿ ಅಡವೇಶ ॥೧೦೫॥

ವರವಿದ್ಯೆಪಡಿಯಲ್ಕೆ ನಾರಿಂಗೆಯಧಿಕಾರ ।
ವಿರುವ ಶಿವಗೀತೆಯೊಳು–ಸ್ತ್ರೀಯಃಶ್ಚಾತ್ರಾದಿ ।
ಕಾರಿಣಃ–ನುಡಿಯು ಅಡವೇಶ ॥೧೦೬॥

ಸತಿಗೆ ಪತಿಯರಿಸುವದು ಪತಿಗೆ ಸತಿ ತಿಳಿಸುವದು ।
ಜೊತೆಗೊಂದು ಬುತ್ತಿವೆರಡು ಜೊತೆಗೂಡುತಲಿ ।
ಗತಿ ಹೊಂದುದುಂಟು ಅಡವೇಶ ॥೧೦೭॥

ನಾರಿಂಗೆ ಸ್ವಾತಂತ್ರ್ಯವಿಹುದೆಂದು ಸ್ವಚ್ಛಂದ ।
ಜಾರೆ ಕೃತಿಯತ್ತ ವೃತ್ತಿ ಹರಿಸಿದರೆ ನಿ ।
ಮ್ಮಿರವ ತಿಳಿಹೇಳಿ ಅಡವೇಶ ॥೧೦೮॥

ಲಕ್ಷ್ಮಮ್ಮನಂತವಳು ಲಕುಮಿ ಸ್ತ್ರೀವಿರಬೇಕು ।
ತಕ್ಕ ಸುವಿಚಾರಿ ಮಾನಿನಿಗೆ ಸ್ವಾತಂತ್ರ್ಯ ।
ನಕ್ಕು ನಲಿಯುವದು ಅಡವೇಶ ॥೧೦೯॥

ಸಿಳ್ಳು ನಾರಿಗೆ ಕೇಡು ಕಳ್ಳಿಂಗೆ ಸ್ವಾತಂತ್ರ್ಯ ।
ಮಳ್ಳಿ ಬೆಲ್ಲಕ್ಕೆ ಲುಲ್ಲನ ಕುತಂತ್ರ ಪುರ ।
ಕೆಲ್ಲ ಕೇಡಕ್ಕು ಅಡವೇಶ ॥೧೧೦॥

ತಕ್ಕಲ್ಲ ಚಂಡಿಯಗೆ ರಕ್ಕಸಿಯ ಪುನಸಿಂಗೆ ।
ಬೆಕ್ಕಿ ಭಾವಿಂಗೆ ಸ್ವಾತಂತ್ರ ತತ್ವರಸ ।
ದುಕ್ಕಿ ಭೂಪಾಲು ಆಡವೇಶ ॥೧೧೧॥

ಪಶುವಿಂಗೆ ಸವಬೇಕು ಪಾಶಳಿದ ಮುಕ್ತಗತಿ ।
ಪಾಶಳಿದ ಕುರಿಯು ತೋಳಿಗಾಹಾರ ಸಮ ।
ಸೋಸಿವಿರದವಳು ಆಡವೇಶ ॥೧೧೨॥

ಅನುಭವದ ಸಭೆಯು—ನಿಜಗುಣಿಯ ನಿಜಮುಕ್ತಿ-ಮತಿ ।
ಪೂರ್ಣೆಯಳ ಚರಿತೆ ಕಂಡರಿತು ಸಾಗದೇ ।
ಗುಣ ಗುಣತೆವೇಕೆ ಆಡವೇಶ ॥೧೧೩॥

ಸ್ವೇಚ್ಛೆಗತಿವೆಲ್ಲರಿಗೆ ಕಚ್ಛೆಮಾನಕೆ ಕೇಡು ।
ಮೆಚ್ಚುಮರ್ಯಾದೆ ಒಮ್ಮೊಮ್ಮೆವಿರೆ ಸಿಗದು ।
ಬಚ್ಚಲದ ನೀರು ಆಡವೀಶ ॥೧೧೪॥

ಪುರುಷ—ಪತಿಗಳ ಮೇಲೆ ಕಾರಿಕೊಳ್ಳುದುವೇಕೆ ।
ವಿರುಪತಿಯು ಬಿದಲು ಸ್ವಾತಂತ್ರ ತಂತಾನೆ ।
ಬರುವದಿಲ್ಲೇನು ಆಡವೇಶ ॥೧೧೫॥

ಬಿಡುವ ಪೂರ್ವದಿ ಪೂರ್ವ ಮೃಡ ಶರಣ ಸತಿ ಚರಿತೆ ।
ಬಿಡದೋದಿ ನಾರಿ ನಿಶ್ಚಯಿಸಿ ನಿಶ್ಚಯಿಸು ।
ಒಡೆದದ್ದು ಬರದು ಆಡವೇಶ ॥೧೧೬॥

ಮಾಂಸ ತಿಂದಿಹ ಸ್ವಾನದಾಸೆಯಂ ಬಿಡಬೇಕು ।
ಆ ಸ್ವೇಚ್ಛೆ ಜೀವಿ ಜೊತೆ ಬಾಳು ಹಾಳು ಕೊಡ ।
ಕಾಸು ಸುರಿದಳಿಯೊ ಆಡವೇಶ ॥೧೧೭॥

ಸಚ್ಛಾಸ್ತ್ರ ಪ್ರಿಯ ಸತಿಯು ಮೆಚ್ಚುವದು ಪತಿ ಧರ್ಮ ।
ಸ್ವಚ್ಛ ಸದ್ಧರ್ಮ ನಾರಿಗತಿ ಮತಿಕುಲವ ।
ಮೆಚ್ಚದವರಾರು ಆಡವೇಶ ॥೧೧೮॥

ಕೊರೆದ ಗೆರೆ ಮೀರಲಾ ಹರಣವಾದಳು ಸೀತೆ ।
ತೆರದಿ ನಾರಿಯರು ಗತಿಸಲ್ಕೆ ಶೀಲವದು ।
ಹರಣವಾಗದಿಹುದೆ ಅಡವೇಶ ||೧೧೯||

ಮೈತ್ರೇಯಿ ಗಾರ್ಗೇಯಿ ಪವಿತ್ರ ನಿಲಾಂಬಿಕೆಯು ।
ಪಾತ್ರ ಸುಮತಿಯರು ಆರಿಂದ ಬೇಡಿದರು ।
ಸೂತ್ರ ಹರಿದೊಗೆದು ಅಡವೇಶ ||೧೨೦||

ಧರ್ಮದೊಳ್ ಅಧಿಕಾರ ನರನಾರಿಗುಂಟು ಸಹ ।
ಮೂರ್ತಿ ವಿರಿಸುತಲಿ ಯಾಗ ಮುಗಿಸಿದರಾಮ ।
ಪರಮ ಸೂತ್ರದಲಿ ಅಡವೇಶ ||೧೨೧||

ಜಗಳಗಂಟಿಗೆ ಹಿರಿಯನಾಗಧರ ನಿರಲೇನು ।
ವಾಗ್ಜಾಲನಿಂದ್ಯ ಬಿಡಳೆಂದು-ಕಿವಿಮುಚ್ಚಿ ।
ಸಾಗುವವ ಜಾಣ ಅಡವೇಶ ||೧೨೨||

ಸತಿ ಪತಿಗೆ ಶಪಿಸುವದಿನಿತು ಹೊಸದೆನಿಸದು ಶನಿ ।
ಸತಿಯು ಪತಿಗಂದು-ನೋಟದಿಂ ಭಂಗೆಂಬ ।
ದಿತಿ ಪೂರ್ವ ಶಾಪ ಅಡವೇಶ ||೧೨೩||

ತತ್ವ ಪ್ರಿಯ ಸತಿವಿರಲು ಮೈತ್ರೇಯಿಯೆನಬೇಕು ।
ವಿತ್ತ ಕುವಿಲಾಸ ಲಕ್ಷ್ಯಪರ ತಿಳಿಯುವದು ।
ಹುತ್ತುವಾಶಿಗಳು ಅಡವೇಶ ||೧೨೪||

ಎಲ್ಲೆಲ್ಲಿ ನೋಡಲ್ಕೆ ಖುಲ್ಲ ಕುಲಟೆಯ ಜಾಲ ।
ಮಳ್ಳನುಡಿ ಪ್ರಿಯರು ಮತಿವಂತರಿಂತಿರಲು ।
ಬಲ್ಲಿದರು ಆರು ಅಡವೇಶ ||೧೨೫||

ನಾರಿ ಗುರು

ಪರಮಗುರು ತಾಣವದು ಬರುದೆಂತು ನಾರಿಂಗೆ ।
ಪೂರ್ವ ವಿದುಷಿಯರು ಪ್ರಖ್ಯಾತವಿರೆ ಮಾನ್ಯ ।
ಗುರುಪೀಠ ರಹಿತೆ-ಅಡವೇಶ ||೧೨೬||

ಸತಿಯಳಿಗೆ ಪತಿ ಗುರುವು ಶ್ರುತಿ ಘೋಷಣೆಂತಿರಲು ।
ಮಾತು ಮಾನಿನಿಯು ಗುರುಪೀಠದಾಸೆಯಿಡೆ ।
ವಿತತ ಶೃತಿಹತ್ಯ ಅಡವೇಶ ॥೧೨೭॥

ಪಾಪಿ ಮಾನಿಸಗಳ್ಗೆ, ಶಾಪಕೊಡುವಳುವೆಂದು ।
ಪಾಪಿಯಂಜಿರಲು ನಿಜಗಿಲ್ಲ ಭಯವು ಮತಿ ।
ರೂಪರಾಗಿರಲು ಅಡವೇಶ ॥೧೨೮॥

ರಾಗಳಿದ್ದವರ ಪುರುಷ ಜಗದಾರ್ಯನಾಗುವನು ।
ಯಾಗದಿಂದಲ್ಲ ಪರಿವಿರದ ನಾರಿನರ ।
ಜಗದಾರ್ಯದೆಡೆಗೆ ಅಡವೇಶ ॥೧೨೯॥

ಮಾತುಬಲ್ಲಿದ ಶರಣೆ ರೀತಿಬಲ್ಲಿದಳೇನು ।
ಮಾತಿನಿಂ ಶರಣೆ ಗುರುವೆನಲು ಗುರು ಶಾಸ್ತ್ರ ।
ಹತಮಾಡಿದಂತೆ ಅಡವೇಶ ॥೧೩೦॥

ಉತ್ಪನ್ನಕರ

ದನಕೊಂದು ಮುಗದಾನ ಮಾನವಗೆ ಮುಗಿಯದದ ।
ದಿನಕೊಂದು ಉಂಟು ಎತ್ತು ಹೊರಳದದ ಮುಗ ।
ದಾನ ಬಂಧನವು ಅಡವೇಶ ॥೧೩೧॥

ಕ್ಷೀರುಣಿಸುವಾಕಳಿದು ಕರು ಆಕಳಾಧೀನ ।
ಸರಕಾರಕೆಲ್ಲ ಕರಕೊಡುತ ಧರಿಸು ಶ್ರೀ ।
ಕರ ಭಾಷ್ಯೆ–ಭೂಷೆ ಅಡವೇಶ ॥೧೩೨॥

ರತಿಯರಸದಾಸೆಯದಿ ಸತಿಯುಪದ್ರವ ಸಹನ ।
ಪಾತ ಪರ್ಯಂತ ಸಹಿಸುತಿರೆ ಕರ–ಸವತಿ ।
ಜೊತೆ ಬಾಳುತೇಳು ಅಡವೇಶ ॥೧೩೩॥

ಎನಿತು ಕಷ್ಟಿರಲಿವಳ ಮನದಿಚ್ಛೆ ಪೂರೈಕೆ ।
ಸಾನುರಾಗದಲಿ ಸರಿಯಾದ ಕೊಡಗೆ ಕರ ।
ಮಾನಿಸುತವಿರಲಿ ಅಡವೇಶ ॥೧೩೪॥

ವತನ ಸಂಸ್ಥಾನಗಳು ಪತನವಾದವು ನೋಡ ।
ಜೊತೆಗೆ ಪ್ರತಿಬಂಧ ಧನ ಚಿನ್ನ ಭೂಮನೆಗೆ ।
ಮಿತಿಯ ಸಂತಾನ ಅಡವೇಶ ॥೧೩೫॥

ಗಳಿಸೆನಿತು ಬಳಸುಧನಕಳಕೊಂಡು ಮರಗದಿರು ।
ಗಳಿಸಾವರೀತಿ ಕಳಿಸು ಕರ ಕಸದಂತೆ ।
ಹಳ ಹಳಿಸುದೇಕೊ ಅಡವೇಶ ॥೧೩೬॥

ಪರಿಮಿತಿಯ ಹುರುಕಕ್ಕೆ ಸರಿಯಾದಯುಪಚಾರ ।
ವಿರಿಸದಿರೆ ಕಾಯ ಭರಿತುರಿತ ಕೆರೆತ ವೈ ।
ಕರ–ಕುರಗಳೊಂದೆ ಅಡವೇಶ ॥೧೩೭॥

ಹೊರತಿಲ್ಲ ಕೌಪೀನ ಗಿರಿಶನೆಡೆ ವಿದರ ಗುರಿ ।
ಸ್ಮರನಾಟ ಫಲಕೆ–ದುರ್ಗಿಯಳೆ ಕರರೂಪು ।
ಧರಿಸಿರುವಳೇನೊ ಅಡವೇಶ ॥೧೩೮॥

ವಾದಿ-ವಾದ

ಸೂಸುನಗೆ ನೌಕುವಿರು ದ್ವೇಷವಾದಿಗಳಡಿಯೆ ।
ಮೋಸವಾಗದಿರು ವಿಷಯವಾತ್ಸಲ್ಯತೆಯು ।
ದಾಸನಾಗದಿರು ಅಡವೇಶ ॥೧೩೯॥

ಹೊರಮುರುಕು ಮುಖವಾಡದರಗು ಮನೆಕೃತಮತಿಯು ।
ನರರನೇಹತನ ಪರೀಕ್ಷಿಸುತಂ ಪರದೆ ।
ಹರಿದೊಗೆದು ಹೆಜ್ಜೆ ಅಡವೇಶ ॥೧೪೦॥

ವಾದಿಗಳ ಜೊತೆ ಹೃದಯ ಹೃದಯೊಂದು ಗೂಡಿಸುದು ।
ಚದುರ ನಿನಗೇಕೊ ಕತ್ತೆ ಕುದುರಿಯೊಳಿಡೆ ।
ಒದರುತನ ಭಿನ್ನ ಅಡವೇಶ ॥೧೪೧॥

ಅಧಿಕಾರ ಮದವಳಿಸಿ ವಾದಿ ಬುದ್ಧಿಯ ತಿದ್ದಿ ।
ಹಾದಿ ಹಿಡಿಸಯ್ಯ ಪದರುನಳಿದವಗೇನು ।
ಮಧ್ಯಸ್ಥ ಬೋಧ ಅಡವೇಶ ॥೧೪೨॥

ದ್ವೇಷಿಗಳ ಸ್ನೇಹದಿಂ ವಿಷಕನ್ಯ ಕೆಳೆಲೇಸು ।
ದಸುನೀಗುದೊಮ್ಮೆ ವಿಲ್ಲಿಹುದು ಜ್ವಾಲಾಗ್ನಿ ।
ಉಸಿರಿರುವತನಕ ಅಡವೇಶ ॥೧೪೬॥

ದುರುಳರರ ಮಧ್ಯಸ್ಥ ಹಿರಿತನವು ವಿಷಪಾನ ।
ಚರಿತ ಮಾನ್ಯರಡಿದನುಭವದ ವಾರ್ತೆಗಳು ।
ಶರಣ ಶಿವ ಹಸ್ತ ಅಡವೇಶ ॥೧೪೭॥

**ನಿರ್ಣಯ**

ಭೀಮಬಲ ಬೆಲೆಯೆಷ್ಟು ಕಾಮಿತಾರ್ಥಗಳೆಷ್ಟು ।
ಸೀಮೆ ತಂಟೆಗಳು ಲಕ್ಷಿಸದೆ ಗತಿವಿರಲು ।
ದಮಿತ ಕಷ್ಟಗಳು ಅಡವೇಶ ॥೧೪೫॥

ಬಲ್ಲರೊಳು ಖುಲ್ಲರೊಳು ನಲ್ಲರೊಳು ನಲ್ಲೆಯೊಳು ।
ಸಲ್ಲದಾವಾದ ಮಠ ಪೀಠದೊಳು ಸಹಿತ ।
ವೆಲ್ಲರೊಳಗೊಂದು ಅಡವೇಶ ॥೧೪೬॥

ಸಿರಿ ಶಕ್ತಿ ಜನರೊಲುಮೆ ಸರಿಯಾಗಿ ವಿಹುದೆಂದು ।
ಸರಿ ಬಡವ ಜೊತೆಗೆ ವಾದವೆತ್ತಿದ ನರರ ।
ದುರಿತ ಕೃತಿಕಂಡ ಅಡವೇಶ ॥೧೪೭॥

ನ್ಯಾಯಾಧಿಪತಿವೆದುರು ನ್ಯಾಯವಾದಿಗಳಲ್ಲಿ ।
ಕಾಯ್ದೆಯಿಂ ವಾದ ನಡೆಸಿರಲು ಪಕ್ಷದವ ।
ಹಾಯೆಂದ ಮಧ್ಯ ಅಡವೇಶ ॥೧೪೮॥

ಸಿರಿಕಂಡು ಶಿವಬಾಯಿ ತೆರೆಯುವದೆನುವ ಗಾದೆ ।
ದಿರುವದಿದ್ದಂತೆ ಬರೆಸಲ್ಕೆಯುಳಿಸುದಕೆ ।
ಸಿರಿವಿರಲು ಸಾಕು ಅಡವೇಶ ॥೧೪೯॥

ಮನವು ಮಾಡಿದ ದೋಷ ಗುಣಿಯು ತಿಳಿಯುವನಯ್ಯ ।
ಮನನೀಯ ಪುರದ ಹಿರಿಯರಿರುವಲ್ಲಿ ನ್ಯಾ ।
ಯೆನಿತು ಹೊರಬೀಳದು ಅಡವೇಶ ॥೧೫೦॥

ಸಾಕ್ಷಿಗಳ ರಾಕ್ಷಸರ ನಕ್ಷೆವೆಂತಹುದಯ್ಯ ।
ಸಾಕ್ಷಿಯಿಂ ಜೀವಿಯೇರಿಳಿತನಾಗುತಿರೆ ।
ಭಕ್ಷಣದರಿಂದ ಅಡವೇಶ ॥೧೫೧॥

ಗಣಪನಮ ಸೂಚನವು ಚಿನ್ಮತಿಯೆ ಸರಳೆಂಬ ।
ದನುಜ ಪ್ರದಕ್ಷಣೆಯು ಕರ್ಮಕಪಜಯವೆಂತು ।
ಸನ್ಮತಿಯೆ ಮುಂದೆ ಅಡವೇಶ ॥೧೫೨॥

ಭದ್ರಕಾಗದ ಪತ್ರವಿರೆ ಸಿರಿ ವಶೀಲಿಗಳು ।
ವಿರದೆ ಗತಿಬೇಡ ಮೀರಿದರೆ ಮನೆಯೆಲ್ಲ ।
ಛಿದ್ರವಾಗುವದು ಅಡವೇಶ ॥೧೫೩॥

ಬಾಯನುಡಿ ನಂಬದಿರುಪಾಯ ಲೇಖನ ನಂಬಿ ।
ನ್ಯಾಯ ನಿರ್ಣಯುವ ಘೋಷಿಸುವ ಮೂರ್ತಿಗಳ ।
ಧ್ಯೇಯ ಯಮಧರ್ಮ ಅಡವೇಶ ॥೧೫೪॥

ನಿಲವರಿತ ನಿರ್ಣಯುವ ನೆಲಿಸುವಾ ಲಿಪಿವಿರಲಿ ।
ಬಲಪಾರ್ಥಿವಾಕ ಹಣವಶೀಲಿಯನಳಿದು ।
ಶೀಲದಿಂದಿರಲಿ ಅಡವೇಶ ॥೧೫೫॥

ಎರಡು ಮರಿವಿರಲೆನುವ ಸಿರಣಯುದ ಮೂರ್ತಿಗಳು ।
ಬರೆಯುವುದನು ಬಿಡರು ವಧುವಿಗೆರಡು ವರಗಳು ।
ವಿರಲಿ ವಿರಲೆಂದು ಅಡವೇಶ ॥೧೫೬॥

ನ್ಯಾಯಾಧಿಪತಿ ಮಂತ್ರಿಯನ್ಯವರ ಪೀಠಕ್ಕೆ ।
ಶ್ರೇಯ ಸಂನ್ಯಾಸಿವಿರೆಲೇಸು ಬಿಡೆಯಳಿಯೊ ।
ನ್ಯಾಯ ನಿರ್ಣಯದಿ ಅಡವೇಶ ॥೧೫೭॥

ಗಾಣವಿದು ಎನಬೇಕು ಏನೊಂದು ಹನಿವಿಡದ ।
ಗಣಿಗಬ್ಬು ಸಿಪ್ಪೆಯಾದಂತೆ ನ್ಯಾಯದೊಳು ।
ಮಾನವನು ಸೊಪ್ಪೆ ಅಡವೇಶ ॥೧೫೮॥

## ಸಂಯಮ

ಮೂರು ಮೂಲಿಗಳುಂಟು ಸರಿಯಾದ ಗುಣ ಹುಡುಕು ।
ಮೂರು ಶಬ್ದಗಳ ಮರೆತವಗೆ ಕರೆಯುಂಟು ।
ವಿರಿಸು ಕಡಿವಾಣ ಅಡವೇಶ ॥೧೫೯॥

ಇರಲಿ ಸಂಯಮನ–ಸಂಸಾರವಿಸ್ಮೃತಿ ಪೂರ್ವಕಂ ।
ಭಗವದಾಸಕ್ತಿಃ ನಿರೋಧಃ–ವಿನಿತುಣಿಸು ।
ಸರಿಯಾಗಿ ಕುಲಕೆ ಅಡವೇಶ ॥೧೬೦॥

ಈ ನಿರೋಧದ ಕಾಯ್ದೆ ಮನುಜರಿಗೆ ಸರಿವಿರಲಿ ;
ಗಿಣಿಗೆ ಬೆದರಿಕೆಯು ಗಣಿಕಂಡು ಗತಿಯೇಕೆ ।
ಯುಣಿಸು ಸಮನಾಗಿ ಅಡವೇಶ ॥೧೬೧॥



(೫)

## ಸಮಯ ಸಂಕೇತ

**ಸಂಸ್ಕೃತಿ–ಸಂಸ್ಕಾರ**

ಸತಿಪತಿಗೆ ಯತಿಯಂಗೆ ಸತತ ಸಂಸಾರುಂಟು ।
ರತಿ ಪ್ರತ್ಯಗಾತ್ಮ ಯತಿಗಿರಲು ದಂಪತಿಯ ।
ಗತಿಯು ಹೊರವೃತ್ತಿ ಅಡವೇಶ ॥೧॥

ಯೋಗಿಯೋಳ್ ಒಂದು ಕೃಯೆ ರೋಗಿಯೋಳ್ ಭೋಗಿವರ ।
ಯೋಗಿಯೋಳ್ ಒಂದು ಪ್ರತ್ಯಕ್ಷಾಪ್ರತ್ಯಕ್ಷ ।
ಬಗೆಯ ನಿಶ್ಚಯಿಸು ಅಡವೇಶ ॥೨॥

ಬರಿ ವಿಚಾರದಿ ತೃಪ್ತಿ ಬರದು ಕೃತಿಯೊಳಗದು ।
ಬರಬೇಕು ನೀರಡಿಸಲವನು ಕರವೆತ್ತ ।
ದಿರೆ ಪೂರ್ತಿಹುದೇ ಅಡವೇಶ ॥೩॥

ಬಾಳು ಬಾಳೆಯ ಬಣವು ಕಳೆಯಲೊಂದನು ಮತ್ತೆ ।
ಬೆಳೆದು ಫಲಕೊಡುಗೆ ವ್ಯಕ್ತಿತ್ವ ಬಾಳುವೆಯ ।
ನಿಲವು ತಿಳಿಯಣ್ಣ ಅಡವೇಶ ॥೪॥

ಸೆಲೆ ಮುಂದು ಮುಂದೋಟ ಸೆಲೆ ಹಿಂದೆ ಬರುತಿಹುದು ।
ಬೆಳೆದಂತೆ ಜೀವಿ ಬೆಳೆದು ಮೂಲಾಧಾರ ।
ಬಲವಿಡಿದ ವಿಶ್ವ ಅಡವೇಶ ॥೫॥

ಏಸು ಜನ್ಮಾಂತರದಿ ಘಾಸಿಯಾಗುತ ಬಂದ್ಯೊ ।
ಬೀಸುತಿಹಕಲ್ಲು ತಿರುಗುತಿರೆ ತಿರಕೊಂಡು ।
ತುಸು ಪಾಪ ಪುಣ್ಯ ಅಡವೇಶ ॥೬॥

ಋಷಿ ಸತಿಯರೂ ಬಂಧ ಈಶನಾ ಮೋಹದಲಿ ।
ಹಿಸುಕೊಗೆದು ಶೀಲ ಗರ್ಭಿಣಿಯ ಫಲವೆದುವೆ ।
ಬೀಸಿದರೊ ರೂಪು ಅಡವೇಶ ।೭॥

ಒಂದಕ್ಕೆ ಒಂದು ಪ್ರತಿ ಹಿಂದಿನಿಂ ಬಂದಿಹುದು !
ಒಂದೆ ತೆರನಿರಲು ರಸದುದಯ ನಿನಗೆಲ್ಲೋ ।
ಬೆಂದ ಭರಮಣ್ಣ ಅಡವೇಶ ।೮॥

ಹಿರಿಯರಳಿದಿಹ ನಾಯಿ ಪುರವೆಲ್ಲ ತಿರಗುವದು ।
ಕಿರಕಿರನೆ ಹಲ್ಲು ಕಿರಚುವದು ಸೆರಗೊಗೆದು ।
ಮರೆತು ಮರಗೆಂತೊ ಅಡವೇಶ ॥೯॥

ಮನೆಯೊಳಿರೆ ಗವಿಯೊಳಿರೆ ತುಣುಕು ಕೌಪೀನಗಳು ।
ಮನಮರೆಯದೆಂದು ಹನಿಹನಿಯ ಮರೆತು–ಮುನಿ ।
ನೀನಾದೆ ಎಂದು ಅಡವೇಶ ॥೧೦॥

ನಾರಿನರರಂಶವಿದು ಸರಿಬೆರಕೆ ಯುಗಸೃಷ್ಟಿ ॥
ತೋರದು ನಯನಕೆ ತಿರಗುತಿಹ ಬಿರುಗಾಳಿ ।
ತೋರುತಿದೆ ಬೆರಿಕೆ ಅಡವೇಶ ॥೧೧॥

ಕಳ್ಳಿಂಗೆ ಮಳ್ಳಿಂಗೆ ಬೆಲ್ಲಕ್ಕೆ ಬಾಲಿಂಗೆ ।
ಸಲ್ಲುಕಲ್ಲಕ್ಕೆ ಸಂಸ್ಕಾರ ವೆಲ್ಲಕ್ಕೆ ।
ವಿಲ್ಲೆನಲು ಕಷ್ಟ ಅಡವೇಶ ॥೧೨॥

ಸಂಸ್ಕಾರವಳಿದಿರಲು ಕಂಸ ಬಾಳುವೆಯುಹುದು ।
ಸಂಸ್ಕಾರ ಶುದ್ಧವಿರಲು ನಿರ್ಭೀಕತೆಯು ।
ಹಂಸ ಗುಣಸಿದ್ಧ ಅಡವೇಶ ॥೧೩॥

ಬಾಳ್–ಬೊಬ್ಬೆ

ತಿಗರಿ ಚಕ್ರದ ಭ್ರಮಣಿ ಜಗದ ಜೀವದಯಾತ್ರೆ ।
ಸೊಗಸು ಸ್ವಚ್ಛಂದ ಕಡೆಗೊಮ್ಮೆ ಒಗೆಗುಂದಿ ।
ರಗಡಿ ಭಸ್ಮಾಯ್ತು ಅಡವೇಶ ॥೧೪॥

ಲಜ್ಜೆವಳಿಯುತ ಬಾಳು ಲಜ್ಜೆವಿಡಿಯುತ ಪೇಳು ।
ಸಜ್ಜನರಡಿಯೆ ಲಜ್ಜೆಯಳಿಯುತ ಬೀಳು ।
ರಜ್ಜು–ತಿಳಿಯುದಕೆ ಅಡವೇಶ ||೧೫||

ಸರಿಗೆರೆಯದಾಟದಾ ನಿರಿಹೊಡೆತ ಬೆನ್ನುರಿತ ।
ವಿರಲು ಕಥನೇನು ಸರಿಹಾಯದಿರೆ ಜನುಮ ।
ಮರಳಿ ಗುರಿಯೇಟು ಅಡವೇಶ ||೧೬||

ನಾವೆ ಗತಿಯತ್ತಿತ್ತ ನಾವಿಕನು ಬೇಸತ್ತು ।
ಜೀವಿಗಳ ವೊತ್ತವಿಂತಿಷ್ಟೆ ನಿಸ್ತಬ್ದ ।
ತಿಳಿಯೋ ನಿಸ್ತರಣ ಅಡವೇಶ ||೧೭||

ಫಳಫಳನೆ ನಕ್ಷತ್ರ ಹೊಳೆಯುತಿರೆ ಗಗನದಲಿ ।
ಚಲಿಸಿ ಸಂಧಿಸುತೆ ಮುದ್ದಿಸುವನಾರ್ ಮಧುರ ।
ತಳಮಳತೆ ಮಾತ್ರ ಅಡವೇಶ ||೧೮||

ಹೆಸರಿಡಲು ಮಾತ್ರದಿಂದಾ ಸೂರ ವಿಕ್ರಮನೆ ।
ಬಸಿರುಸಿರರಿರದಿರೆ ಬಾಣಂತಿಯಾವಾಗ ।
ಹಸಿ ಹಸಿರುವಾಗು ಅಡವೇಶ ||೧೯||

ಹೋಳಿಹುಣ್ಣಿವೆ ತುಡುಗು ಸೂಳಿಗೂ ಪಾಡಾಯ್ತು ।
ಬಾಳೊಂದು ಬೊಬ್ಬೆ ಬೀಳೇಳುತಿರೆ ಜೊಬ್ಬೆ ।
ಹೋಳಾಯ್ತು ಗೊಬ್ಬೆ ಅಡವೇಶ ||೨೦||

ಚೇಳು ಮಲಗಿರಲಲ್ಲಿ ಸುಳಿಯುವದು ನಿನಗೇಕೋ ।
ಸುಳಿಯಾದ ಹಾವು ನೋಡಿ ಸರಿಯುವದೇಕೊ ।
ತಾಳ್‌ಬಾಳು ಮನವೆ ಅಡವೇಶ ||೨೧||

ಗಿಡ ಹಚ್ಚಲೇನಾಯ್ತು ಮೂಡುತಿಹ ಫಲಕೆ ತಾಳ್ ।
ಮೂಡಿದೊಡೆವೇನು ಮೇಳವಿಸಿ ತೃಪ್ತಿಪಡು ।
ಬಾಡಿ ಬಾಳದಿರು ಅಡವೇಶ ||೨೨||

ಅಳುತ ನೀಂ ಕೊಳೆಯದಿರು ಕೊಳೆತು ಕ್ರಿಮಿಯಾಗದಿರು ।
ಬಳಲುತಿಹ ದಾಸ್ಯ ತುಳಿದೇಳು ಕೊಳೆವ ತನು ।
ಬೀಳುತಕ ಗೋಳು ಅಡವೇಶ ॥೨೩॥

ಮರ್ಕ್ಯರಿ ಮಿಂಚಲ್ಲಿ ನಕ್ಕುನಲಿದಾಡಲಣು ।
ಬಕ್ಕರಿಯು ಸಿಗದ ಬಂಧುಗಳದೆಣಿಕೆಷ್ಟೊ ।
ಬಿಕ್ಕುತಿಹರೆಷ್ಟೊ ಅಡವೇಶ ॥೨೪॥

ದೊಡ್ಡವರ ಕೃತಿಮಾಟ ದೊಡ್ಡದಾ ಚರಿತೆಯಿದು ।
ಯಡ್ಡಿಗಳ ನಳಿದು ಸಡ್ಡೊಡೆದ ಒಡಜೀವಿ ।
ಕಡ್ಡಿ ಸಹ ಕಾಣ ಅಡವೇಶ ॥೨೫॥

ಅನುಬಂಧ

ಸರಸನದಿಯಬ್ಧಿಝುರಿ ಕೆರೆಭಾವಿಯ ತರಂಗ ।
ಏರಿಳಿತ ಸಮತೆ ಮಿತದಮಿತ ಜೀವಿಯೊಳು ।
ಭರಿತ ವಿಭ್ರಾಂತ ಅಡವೇಶ ॥೨೬॥

ಋಣ ಬಂಧ ಜೀವಿಗಳ ಸೆಣಸಾಟ ಕಿರಚಾಟ ।
ಕುಣಿದಾಟ ಮಿಂಚು ಗುರುಶಿಷ್ಯರೊಳು ಬಂಧ ।
ಘನ ಘನತೆ ಸಂದ ಅಡವೇಶ ॥೨೭॥

ವಿನಯರಹಿತನು ಜೀವಿ ಸನಿಹಬರದಿರೆ ಸಿಗದು ।
ಮನ ಮೆಲುಕು ಮಂತ್ರ ಪದಬಂಧನೂಪುರದ ।
ಗಣನೀಯನಾದ ಅಡವೇಶ ॥೨೮॥

ಆರ ಋಣದೊಳುವಾನುವಿರಲಾರೆವೆಂಬ ನುಡಿ ।
ವಿರಲೇನು ನಿತ್ಯದೊಂದಿಲ್ಲದೊಂದು ಋಣ ।
ನರಬಂಧ ಸತ್ಯ ಅಡವೇಶ ॥೨೯॥

ಬಿಸಿಗಲ್ಲ ಜಲಹನಿಯ ಕಸಿದುಕೊಂಡರು ಸಿಗದು ।
ಬಿಸಿಯುದಪಮಾನ ಕೂಗಿಕೊಂಡರು ಬರದು ।
ಆಸರೆಯ ಜಗವು ಅಡವೇಶ ॥೩೦॥

ಹೊಸ ವಸ್ತು ಹಳೆದಾಯ್ತು ಹಸಿಬಿಸಿಯ ವಿಷವಾಯ್ತು ।
ರಸಪಡೆದು ಬೆಳೆದ ಮಂಗನುಡದಾರತೆಯ ।
ರಸಿಕ ಜೀವನವು ಆಡವೇಶ ॥೩೧॥

ಬಡವರರ ಗುಡಿಸಲವ ಕೆಡೆದು ನುಡಿಯಲು ಬೇಡ ।
ನುಡಿದು ನಡೆದಿರುವ ಮಹಪುರುಷ–ಮಹಕಾವ್ಯ ।
ಸಿಡಿದ ಸ್ಥಾನವಿದು ಆಡವೇಶ ॥೩೨॥

ಒಳಹೊಕ್ಕು ವೈಷಮ್ಯ ಸುಳಿಸುತಿಹ ಹಾಳು ಹುಳ ।
ಬೆಳೆದು ಬೆಳೆಯುತಿಹ ಹೊರಗವನ ಸಾಧುತನ ।
ಹಳೆಯದನುಬಂಧ ಆಡವೇಶ ॥೩೩॥

ರಜನಿ ರಾಜರು ಬಹಳ ಭಜನ ಭಾವಿಕ ವಿರಳ ।
ರಜನಿಯೊಳಿರು ನೀ ನಿನ್ನೊಳಿಡಬೇಡದನು ।
ಸೌಜನ್ಯ ಗ್ರಹಣ ಆಡವೇಶ ॥೩೪॥

ಗಗನೊಂದು ತಾರೆಗಳು ಅಗಣಿತಂ ಹೆಸರುಗಳು ।
ಸೊಗಸು ಪ್ರಭೆಯೊಂದುವಿರೆ ಸದಾ ಓಡಾಟ ।
ರಗಳೆ ಸೋಸ್ಯಾಟೆ ಆಡವೇಶ ॥೩೫॥

ಮುಗ್ಗಲಿನ ಮಧುಕಂಡು ಹಿಗ್ಗಬೇಡೆಲೊ ಹುಳವೆ ।
ನೆಗ್ಗಿಲದ ಮುಳ್ಳು ಹೇಗಿರಲು ನಟ್ಟುವದು ।
ಮುಗ್ಗುರಿಸಬೇಡ ಆಡವೇಶ ॥೩೬॥

ಹಾಲಿಗೆಲ್ಲಿದೆ ಮೈಲಿ ಕಾಲಗೆಲ್ಲಿದೆ ಕರುಣೆ ।
ಗಾಳಿಂಗೆ ಭೇದ ವಿದ್ಯಾಪವಿತ್ರ ತಿಳಿ ।
ಹೊಲಸಿನಾ ಕಮಲ ಆಡವೇಶ ॥೩೭॥

ಪ್ರಕ್ರಿಯ–ಪುನರುತ್ಥಾನ

ನೋಡಿ ನುಡಿ ಹಿಡಿದು ಪಡೆ ಕೊಡುತ ಕೆಡದಿರು ಜೀವಿ ।
ಪಡೆ ಪ್ರಕ್ರಿಯಾತ್ಮ ತತ್ವಾರ್ಥ ದರ್ಶನಂ ।
ತಡೆ ಸಕ್ರಿಯಾತ್ಮ ಆಡವೇಶ ॥೩೮॥

ಎಲ್ಲೆಲ್ಲೊಯ್ಯೇ ರುಚಿಲಹರಿ ಜಿಲ್ಲುಳಿದು ಬಾಣಗತಿ ।
ತಲ್ಲಣಿಸುದೇಕೆ ತಳಗಲ್ಲು ಯುಳಿದಿಹುದು ।
ಬೆಲ್ಲುಣಿಗೆ ಬರಿದು ಆಡವೇಶ ॥೪೯॥

ಸರ್ವಾತ್ಮ ಸುಡಿ ಸರಳ ತೋರ್ಪುದೋ ನಿನ್ ಕರುಳ ।
ತೀವ್ರ ತಿಳಿಯೋ ನಿ ಮಹದ್ಬ್ರಹ್ಮ ಗೀತೆ ಸುಡಿ ।
ನಿರ್ವಿಕಾರಾತ್ಮ ಆಡವೇಶ ॥೫೦॥

ನಯನೊಂದು ಶಯನ ಮನೆ ಶ್ರೇಯವಹ ಪರ್ಯಂಕ
ನಯನದೆವೆ ಪಂಕ ಬೀಸುತಿರೆ ರತಿಯಂಕ ।
ಶ್ರೇಯಾಂಕ ಮಂಕ ಆಡವೇಶ ॥೫೧॥

ಸಪನೆ ಬೀಳುತವಿರಲಿ ಸಪನೆಯೊಳು ತಪವಿರಲಿ ।
ಸುಪಥವಿಡಿದಿಹುದ ಅಕ್ಷಯಾಂಬಲಿಯಂಥ :
ಸಫಲ ಚಿರವಿರಲಿ ಆಡವೇಶ ॥೫೨॥

ಮೂರವಸ್ಥೆಗಳೇಕವಿರುವಂತೆ ಮಾಡಿದರೆ ।
ಕರ್ಮರಿವು ಸಮತೆ ಸಮುಚ್ಚಯ ಸರಳಾಗ ।
ವಿರಿಸೊಂದು ತುತ್ತು ಆಡವೇಶ ॥೫೩॥

ನಗೆಯಲ್ಲಿವಿಲ್ಲವೋ ಹೊಗೆಯಿಲ್ಲ ಹೊಗೆಯೆನಗೆ ।
ನಗುವಿಲ್ಲದಿರೆ ಹರಿಶ್ಚಂದ್ರ ಘಾಟದೆಡೆ ।
ಹೆಗಲಿಡಿದು ಎತ್ತು ಆಡವೇಶ ॥೫೪॥

ಸುಳಿದ ಸುಂಟರಗಾಳಿ ಸುಳಿಯಿಂದಲೆದ್ದೇಳು ।
ಸೀಳುವದು ಭೈತ್ರ್ಯ ಬಿರುಗಾಳಿ ತೆರೆ ಘೋರ ।
ಗೋಳು ಮಾಡುವದು ಆಡವೇಶ ॥೫೫॥

ಏಳುದಕೆ ಬಹುಶ್ರಮತೆ ಬೀಳುದಕೆಯಣು ಸಾಕು ।
ಬೀಳುತಿರಲೇಳು ತಿಳಿಯೊ ಪುನರುತ್ಥಾನ ।
ಸೆಲೆಯೊಮ್ಮೆ ಹೊನಲು ಆಡವೇಶ ॥೫೬॥

ಚನ್ನಮ್ಮ ಮಲ್ಲಮ್ಮ ಹೊನ್ನಮ್ಮ ಮಾಚಿದೇವ ।
ಮನ್ಯ ಕಾಳಿಕಾ ವೀರಭದ್ರ ಶಿವಾಜಿ ।
ಬಣ್ಣ ತಿಳಿದೇಳು ಅಡವೇಶ ॥೪೭॥

ವೀರರಸ ಪುರುಷಾಗು ಸೇರು ತಕ್ಕಡಿಯಾಗು ।
ಶೂರ ರೇಚಯ್ಯ ರೇಣುಕರ ಬೆತ್ತಾಗು ।
ಸ್ವರ ಪಾಂಚಜನ್ಯ ಅಡವೇಶ ॥೪೮॥

ಮಾರಿಕೆಯು ನೀನಾಗು ಘೋರಾಣು ಬಾಂಬಾಗು ।
ಭಾರಿ ಹಿಮಬಂಡೆ ಸುರಿಸೋ ನಿರಂತರಂ ।
ವೈರಿಯೆದುರಿನೊಳು ಅಡವೇಶ ॥೪೯॥

ಉತ್ಕ್ರಾಂತಿ

ಗತಗಾಲ ಚರಿತೊಂದು ದುತ್ಕ್ರಾಂತಿ ದಿನಕೊಂದು !
ಸತತದಾಭಾಸದಾಯಾಸ ಪರಿಭ್ರಮಣ ।
ದುತ್ಪಾತ ಸಹಿತ ಅಡವೇಶ ॥೫೦॥

ಹೇಳ್ ಮನಕೆ ನಿಷ್ಠುರದಿ ತಾಳ್ ನೀನು ಬಾಳ್ಬೆಳಗು ।
ಮೇಳ್ವೆನಿತು ನಿನಗೆವೆಲ್ಲಿಹುದು ನಿತ್ಯದಿಂ ।
ಕೇಳ್ ಸೂಳ್ನುಡಿಯ ಅಡವೇಶ ॥೫೧॥

ಸುರಿದು ಸುರಿಯುತಿಪೆ ಸರಹರಿದು ಹರಿಯುತಿದೆ ।
ಸರಳ ಸೇರುತಿದೆ ನೀರ್ಮನೆಯುಲುಕುತಿರೆ ।
ಮರಳಿ ಘನ ಸರಳ ಅಡವೇಶ ॥೫೨॥

ಕೆಡಕೊಳಿತು ಕಾರ್ಯದಲಿ ನಡೆದವನ ಚಿಂತೆಕೋ ।
ಕಡೆಗವಗೆ ಫಲವು ಮಾಡಿದವರುಡಿತುಂಬ ।
ಕೊಡುವೆನುವರಾರು ಅಡವೇಶ ॥೫೩॥

ಕತ್ತಿಗೆ ನಮನ

ಕಾಮಿತ ಫಲೇಚ್ಛೆಗೆ ನಮನ ನಡೆಯುವದಯ್ಯ ।
ಕಾಮುಳಿದವಂಗೆ ನಮನಿಲ್ಲ ಫಲವೆಂತು ।
ಸಮಯರಿತು ನಮನ ಅಡವೇಶ ॥೫೪॥

ಸಮನವಿರದಿರೆ ದಮನ ಸುಮನವಿರೆ ರುಚಿ ಜಮನ ।
ಶಮನವೆಲ್ಲಿಡೆಗೆ ವಿಹುದು ವಿರಲಿಕ್ಕಿಲ್ಲ ।
ಯಮುನ ತಿಳಿರಾಗ ಅಡವೇಶ ॥೫೫॥

ಸ್ಥಾ ನರಿತು ಸಾಗುತಿರು ಮನ್ನಿಸದ ಬ್ರಹ್ಮಶಿರ ।
ವೇನಾಯ್ತು ಕೇಳು ಕಾಮಿಣಿಗೆ ನಮಿಸದಿರೆ ।
ಮನಜ ಸುಖ ಹಾಳು ಅಡವೇಶ ॥೫೬॥

ಬಾಗಿಲದಿ ಬಾಗದಿರೆ ಬುಗಟೆ ನಿನಗುಂಟಯ್ಯ ।
ಕೂಗುತಿರು ಕತ್ತೆಗಳಿಗೊಪ್ಪು ಬಾಗದಿರೆ ।
ಭಾಗಾಯ್ತು ಬುತ್ತಿ ಅಡವೇಶ ॥೫೭॥

## ವರದಕ್ಷಿಣೆ–ಗುರುದಕ್ಷಿಣೆ

ಲಗ್ನದಿಂ ಪ್ರಾರಂಭ ವಿಘ್ನದಂಜಿಕೆ ಪೂರ್ಣ
ಭಗ್ನವೋ ವಿವಿಧ ನಿಲ್ಲಿಸೋ ಗಾಡಿ ಸತಿ ।
ಸಿಗ್ನಲನು ನೋಡಿ ಅಡವೇಶ ॥೫೮॥

ಗುರುದಕ್ಷಿಣೆಗಿಂತ ವರದಕ್ಷಿಣೇ ಮೇಲು ।
ವಿರುಪಯ್ಯ ಮಿಂಡು ಅಧಿಕಾರಿಗಿಂತ ಒದಿ ।
ಕಾರಕೂನ್ ಹೆಚ್ಚು ಅಡವೇಶ ॥೫೯॥

ತಪ್ಪು ಮಾಡಿದ ಚೆಪ್ಪನೊಪ್ಪಿ ಪದಹಿಡಿಯುವನು ।
ತಪ್ಪಿರಲು ತಾನು ಹಿಡಿಯುತಳಿಯನ ಪಾದ ।
ತಪ್ಪಿಸಿದ ಕೇಡು ಅಡವೇಶ ॥೬೦॥

ಫಳಕೆರಡು ಸಂಬಂಧ ಸುಳಿಯೊಡೆವದಾಸೆಯಲಿ ।
ತಾಳಿ ತನುಬಂಧ ಬೀಗರೂಟೆರದೆ ಬಹು ।
ಗೋಳಾಟವಯ್ಯ ಅಡವೇಶ ॥೬೧॥

ವರದಕ್ಷಿಣೆಬಾರದಿರೆ ಗುರುದಕ್ಷಿಣೆವಿನ್ನೆಲ್ಲಿ ।
ವರನೆ ಗುರುವಾದ ಸಿರಿಗುರಿಯನಿಟ್ಟೊಬ್ಬ ।
ಕೊರಳ ಕೊಯ್ವೊಬ್ಬ ಅಡವೇಶ ॥೬೨॥

ಹತ್ತುಸಾವಿರ ಹೋಯ್ತು ಹತ್ತು ರೂಪಾಯಿಗಳು ।
ಬಿತ್ತದಿರೆ ಕೈಗೆಯಾಚಾರ್ಯನೊದರುತಿಹ ।
ಕುತ್ತು ಮಂತ್ರವನು ಅಡವೇಶ ॥೬೩॥

ಬಳಿದು ಧನವೆನಿತುವಿಡೆಯಳಿಯ ಮುಖಬಳಲಿಕೆಯು ।
ಬಳಿದು ವಿಡದಿರಲು ಎರಡು ಮುಖದುರಗಂತೆ ।
ಯಳಿಯ ಪೋಲೀಸ ಅಡವೇಶ ॥೬೪॥

ಅಡಗದಿಹ ವಧುವನ್ನುದಡಗಿಸುವ ಯೋಗ್ಯತೆಯು ।
ಹುಡುಗನಿಗೆಯುಂಟು ಮರುಗದಿರು ಜಂಗಮನೆ ।
ಕೊಡದಿರಲು ಕಾಸು ಅಡವೇಶ ॥೬೫॥

ದಕ್ಷಿಣೆಯ ಬೇಡುವವ ದಕ್ಷನಾಗಿರಬೇಕು ।
ರಕ್ಷೆ ಮಾಡುದಕೆ ಕಾಳಿ ವೀರ್ಭದ್ರಸಂ ।
ತ್ರ್ಯಕ್ಷ ಕಳಿಸಿಲ್ಲ ಅಡವೇಶ ॥೬೬॥

ಉಣಿಸಿ ದಕ್ಷಿಣೆ ಕೊಡದ ಗುಣಿಗಳು ಸಮಾಜದಲಿ ।
ಎಣಿಸುತಿಹರಯ್ಯ ಎಣಿಕೆ ನನಗೇಕಯ್ಯ ।
ಹೆಣವೋ ಹಣವೋ ಅಡವೇಶ ॥೬೭॥

ಎಲ್ಲರೂ ಬೇಡುತಿರೆವಿಲ್ಲಿ ಭಿನ್ನತೆಯುಂಟು ।
ಖುಲ್ಲರಿಗೆ ಸಲ್ಲಿಸುವರುಂಟು ಭಿಕ್ಷುಕಗೆ ।
ನಿಲ್ಲುದಕೆ ಸಿಗದು ಅಡವೇಶ ॥೬೮॥

ಹಿಪ್ಪಿಗಳು

ನರರ ಬಟ್ಟೆಯ ನಾರಿ ನಾರಿಬಟ್ಟೆಯ ನರನು ·
ಧರಿಸುತಿರುಕಾಲ ಪಡಿಯಚ್ಚು ಒಂದೆತೆರ ।
ಶಿರದಿಂದ ಪದಕೆ ಅಡವೇಶ ॥೬೯॥

ಆದಿಯುಗದೊಳು ಜೀವಿ ಪದರುವಿಲ್ಲವೆದೆಲೆಯ ।
ಮದನೇಂದ್ರಿಯ ಮರೆವು ಮಾಡಿಕೊಂಡಿರಲೆಂದು ।
ಬದಿ ಮರಳು ತಿಂದು ಅಡವೇಶ ॥೭೦॥

ರೆಪ್ಪೆ ರಕ್ಷಿಸುದಕ್ಷಿ ತುಪ್ಪದಿಂ ತೀಕ್ಷ್ಣಮತಿ ।
ಕಪ್ಪೆಗಳ ಕೂಗು ಮಳೆಯ ಮುನ್ಸೂಚನಿರೆ ।
ಹಿಪ್ಪಿಯಿಂ ಲಾಭ ? ಅಡವೇಶ ॥೭೧॥

ಇವನೋರ್ವ ನವಧೂತ ನವಧೂತೆ ಯುಗಯುಕ್ತಿ ।
ಯೌವನತೆ ಮುಕ್ತ ನಟನಟಿಯ ಮಾದಕತೆ ।
ನವ್ಯ ಯುವ ರಕ್ತ ಅಡವೇಶ ॥೭೨॥

ಕತ್ತಿಬಟ್ಟಲ ಮೂಲಿಗೊತ್ತಿಟ್ಟ ಹಡಪಿಗನು ।
ಕತ್ತಿ-ಸಿಪ್ಪಿಗಳ ಕೇಶಕ್ಕೆ ವಿಶ್ರಾಂತಿ ।
ಯಿತ್ತನವ ಸತ್ತ ಅಡವೇಶ ॥೭೩॥

ಶವ-ವಾಣಿ

ಮನುಜರಳು ಶವಕಂಡು ಮೌನದಿಂದರಿಸುತಿದೆ ।
ಗೋಣು ಹಾಕುತಲಿವಿದುವಲ್ಲ ಮುಂದೆ ತಾಂ ।
ಮೌನಿ ನನ್ನಂತೆ ಅಡವೇಶ ॥೭೪॥

ಅತ್ತು ಕರೆದರೆವಿಲ್ಲ ಸುತ್ತುವರಿದವಗೆಲ್ಲ ।
ಹೊತ್ತು ಬಂದಾಗ ರಸಮುಗಿದು ಪಯಣ ನ ।
ನ್ನತ್ತ ನನ್ನಂತೆ ಅಡವೇಶ ॥೭೫॥

ಹೆಣವೆಂದು ಹೆಸರಿಟ್ಟರೆನಗೆ ದುರ್ಗುನಳಿಯದ ।
ಹೆಣಗಳುಂಟಿಷ್ಟೊ ಜಗವು ತನ್ನಯ ಸುಖಕೆ ।
ಹನಿಹೊಸಲುವಯ್ಯ ಅಡವೇಶ ॥೭೬॥

ನಾಚಿಕಳಿದಿಹ ಬಾಳು ರಚನೆಯಿಂ ದೂರಿಂದು ।
ವಾಚಾಳಿ ಜಗದ ನುಡಿಬಂಧ ಹೆಣವೃಂದ ।
ದಾಚೆ ನಾನಿಂದು ಅಡವೇಶ ॥೭೭॥

ರಾತ್ರಿಯೊಳು ಪಾವಕಡಿ ಭೂತಾಗಿ ಕುಣಿವನಿವ ।
ಮಾತುಗಳ ಮರೆಯೊ ಕುಣಿಯುತಿದೆ ನಿಮ್ಮ ಮನ ।
ಬಿತ್ತುದಕೆ ನವಣಿ ಅಡವೇಶ ॥೭೮॥

ಪಾತ್ರೆಗಳ ನಿಮಗಿಟ್ಟು ಯಾತ್ರೆ ನಡೆಸಿದೆನಯ್ಯ ।
ಚೈತ್ರ ಸತ್ಪಾತ್ರ ಧರ್ಮದನ್ನವವಿಡಿದು ।
ಪಾತ್ರೆ ಬಳಸಯ್ಯ ಆಡವೇಶ ||೭೯||

ಎನೆನೋ ಹಾಡ್ಯಾಡಿ ಹೊನ್ನ ಸುಖ ಚಿಂತೆಯೊಳು ।
ಕಣ್ಣೀರುವೆನ್ನ ಗುಣ ನೆನೆಪೊ ?–ಅಲ್ಲಲ್ಲ ।
ಹಣ ನೆನೆದು ಬೊಬ್ಬೆ ಆಡವೇಶ ||೮೦||

ಮಣ್ಣುಗೂಡಿದ ಬಳಿಕ ಪುಣ್ಯತಿಥಿ ನಾಮದಲಿ ।
ಯುಣ್ಣುತಿರುವಾಗ ಬರಲಾಸೆ ನೆನಪಹುದೆ ।
ಬನ್ನಿ ಸ್ನೇಹಿತರೆ ಆಡವೇಶ ||೮೧||

## ತಡೆದು ನೋಡು

ಪದಪದಕೆ ಪ್ರತಿಬಂಧವಿದು ಸೂಚನೈತೆನೋ ।
ಸದರದಿಂ ಮುಂದೆ ಕಮ್ಯುನಿಷ್ಟಾಡಳಿತ ।
ಕದತಗೆದು ಬಂತೊ ಆಡವೇಶ ||೮೨||

ತೋರ್ಗಡೆಗೆ ಹಳಿಪಕ್ಷದಿರವು ಕೆಂಬಾವುಟದ ।
ಸಾರ ತುಂತುರತೆ ಬರಬರುತ ಹೆಚ್ಚಾದ ।
ಧಾರೆ ಮಹಪೂರ ಆಡವೇಶ ||೮೩||

ವಿಶ್ವದೊಳುವಧಿಕಾಂಶ ವಿಶ್ರಾಂತಿವಿರದ ದುಡಿ ।
ತುಸಿರು ಕಾರ್ಮಿಕರ ಬಾವುಟದ ಹಾರಾಟ ।
ತುಸು ತಡೆದು ನೋಡು ಆಡವೇಶ ||೮೪||

## ಸಮಯ ಸ್ಥಿತಿ

ಶಾಲಿವಾಹನ ಶಕೆಯ ಸಾಲಿಡದ ಒಂದೆಂಟು ।
ಮೇಲು ತೊಂಬತಾರ್ ಸಂವತ್ಸರಾನಂದ ।
ಫಲವು ಸಾನಂದ ಆಡವೇಶ ||೮೫||

ರಾಕ್ಷಸದಿ ತದ್ಗುಣದ ತೀಕ್ಷ್ಣಮಳೆ ಹರತಾಳ ।
ಈ ಕ್ಷಣದಿ ತುರ್ತುಸ್ಥಿತಿ–ಹತ್ಯ ಹಸಿಬರವು ।
ತೀಕ್ಷ್ಣದಾಡಳಿತ ಅಡವೇಶ ॥೮೬॥

ಹಾಂಗಂತ ಹೀಗಂತ ಹ್ಯಾಂಗ್ಯಾಂಗೊ ಕಿರಚಾಟ ।
ಹಿಂಗ್ಯಾಂಗವಾಯ್ತುವೆನಬೇಡ ಸಿಗದಾಯ್ತು ।
ಹಂಗ ಹೋಗ್ತದನೊ ಅಡವೇಶ ॥೮೭॥

ಗತಿಸಿದುದು ನೆನೆಯುವದು ಅತಿಸುಖದ ಜೀವಿಗಳು ।
ಗತಿ ಮುಂದೆ ನಷ್ಟ ಬ್ರಷ್ಟರಿಂ ಬಹು ನಷ್ಟ
ಭೀತಿ ಬಿಡದೆಷ್ಟು ಅಡವೇಶ ॥೮೮॥

ಕುರಿ ಬಳಗ ತೋಳನ್ನು ನರಿಯನ್ನ ಕೋಳಿಗಳು ।
ಕರ ಪರ್ಣ ಹಾಕಿ ಆರಿಸಿರೆ ದುರ್ದೈವಿ ।
ಗಿರಿಸಿಂಗವೆತ್ತೊ ಅಡವೇಶ ॥೮೯॥

ಮಾನಿನಿಯ ಜಯಘೋಷ ಕಾನೂನು ಬಹುವೇಷ ।
ಕಾನ್‌ಕಾನ್ ಉತತ್ತಿ ಇಲ್ಲಿ ಬಂತೊ ಸಂಗಯ್ ।
ನೇನು ನುಂಗಿದನೊ ಅಡವೇಶ ॥೯೦॥

ಗಾಳಿ ಬೀಸಿತೋ ತೋಳ ಧೂಳನೆಬ್ಬಿಸಿತೊ ಸಹ ।
ಸೂಳಿಗಿದು ಮೆಚ್ಚು ಗೊಳಿಗೋಳಾಯ್ತೋ ಹ್ಯಾಂಗ್ ।
ವ್ಯಾಳೆ ಬಂದುವೋ ಅಡವೇಶ ॥೯೧॥

ಅಡಿಗೆಮನೆ ಪಡಸಾಲೆ ಗುಡಿಯು ಮಠ ನದಿಯು ತಟ ।
ಗಿಡದಡಿಯೋ ನೋಡೊ ಗೆದ್ದ ಗಿಡಗದ ಕಾಲ ।
ಹಿಡಿದು ಜೋಕಾಲಿ ಅಡವೇಶ ॥೯೨॥

ಕೀಳುಕ್ರಿಮಿ ಮೇಲಾಯ್ತು ಮೇಲು ಮೊಲ ಕೆಳಗಾಯ್ತು ।
ಹಾಲು ಸಿಗದಾಯ್ತು ಸತ್ಯಕ್ಕೆ ಸೋಲಾಯ್ತು ।
ಆಳಿನಾಳಾಯ್ತು ಅಡವೇಶ ॥೯೩॥

ಹಸುವು ಸುಮ್ಮಿದೆಯಯ್ಯ ಹೊಸಗರುವು ಚಲ್ಲಾಟ।
ಪಶುಪತಿಯು ಶಾಂತಿ ಪೂಜೇರಿ ಯಮಪಾಶ।
ಬೀಸುತಿಹುದಯ್ಯ ಆಡವೇಶ ॥೯೪॥

ಹಿರಿಯರರ ದೋಷಗಳು ಸರವಿರಲು ಸೈಪೆನುವ।
ಕುರಿಗಳೆಣಿಕಿಲ್ಲ ಸಭ್ಯರರ ಶಿಖೆಯತ್ತ।
ಗುರಿ ಕಡಿಮೆಯಿಲ್ಲ ಆಡವೇಶ ॥೯೫॥

ಇಲಿ ಬಳಗ ಹುಲಿಗಳನು ಬಲೆಯಿಂದ ಬಂಧಿಸಿವೆ।
ಇಲಿರಾಯನಾಟ ಚಲ್ಲಾಟ ಗುಂಡಾಟ।
ಕೋಲಾಟವಯ್ಯ ಆಡವೇಶ ॥೯೬॥

ದುರ್ಜನರ ಕೋಲಾಟ ಗಾರ್ಧಭದ ಕೂಗಾಟ।
ಮೇರೆ ಮೀರಿಹುದ ನಯನೋಡಿದೊಡೆಯತ್ತ।
ನಾರಿ ಹಿರಿತನವು ಆಡವೇಶ ॥೯೭॥

## ಆತ್ಮಚಿತ್ರ

ಮಾತೆ ನೀಲಾಂಬಿಕೆಯು ಪಿತನು ಶಿವಲಿಂಗೇಶ।
ರಿತರೀ ಸುತನು ದೇಶಿಕನು ಗುರುಕೃಪೆಯೆ।
ರೀತಿ ಗುರುವಾದ ಆಡವೇಶ ॥೯೮॥

ಪ್ರಾಥಮಿಕದಭ್ಯಾಸದತ್ಮ ಕಾಖಂಡಕಿಯೆ।
ಮಾಧ್ಯಮಿಕ ಪೂರ್ತಿ ರನ್ನ ಮುಧುವಳಿ ಬಳಿಕ।
ಮಿತಿವಾಸ ಕಾಶಿ ಆಡವೇಶ ॥೯೯॥

ಕಾಶಿ ಪೀಠಕೆ ಐತಿಹಾಸಿಕತೆ ಬಹಳುಂಟು।
ದರ್ಶನೀಯವದು ನೋಡು ವಿಜ್ಞೆಯನರಗೆ।
ರಾಶಿದಳ ಪ್ರಾಪ್ತಿ ಆಡವೇಶ ॥೧೦೦॥

ಬಾದಶಹ ಹುಮಾಯುನ ಮೊದಲಾದ ನೃಪರಿಂದ।
ಭೂದಾನ-ಮಾನ್ಯ ಪಡೆದ ಪೀಠದೊಳಿರ್ದು।
ಸಾಧಿಸದೆ ಸುಧೆಯ ಆಡವೇಶ ॥೧೦೧॥

ವೀರಮಾಹೇಶ್ವರನು ವೀರಶೈವಾಂಗ ಮತಿ ।
ಸಾರಸುಪ್ರಿಯನು ಸುಪ್ರಿಯರ ನೇಹವನು ।
ಧರಿಸಲುತ್ಕಟನು ಅಡವೇಶ ॥೧೦೨॥

ಪರಮಹಿಮ ಭರಿತಾಂಗ ತರಣಿತನು ತೇಜಾಂಗ ।
ಕರುಣಾ ಕೃಪಾಂಗ ಗುರುಪಾದ ಚರಣಾಂಗ ।
ಕಿರಣ ನಿರುಪಾಧಿ ಅಡವೇಶ ॥೧೦೩॥

ಏನೆಲ್ಲ ಸಹಿಸುವೆನು ಹೀನಮಧುಪರಸಂಗ ।
ನಾನೊಲ್ಲೆ ದೇವ ನಿಜದಿರವ ಕೃತಜ್ಞತೆಯ ।
ಗಣ ಸ್ನೇಹ ಪ್ರಿಯನು ಅಡವೇಶ ॥೧೦೪॥

ಒಂದೊಂದು ಪಕ್ಷದೊಳು ಕುಂದೊಂದು ತೋರುತಿರೆ ।
ಮುಂದೋಡದಾನು ನಿಶ್ಚಯದ ಸಂದಿಪ್ರಿಯ ।
ನೊಂದಿ ನಿಷ್ಪಕ್ಷ ಅಡವೇಶ ॥೧೦೫॥

ವಿನಯದಿಂ ಬಂದವಗೆ ಮಣಿದೆನ್ನ ಸೇವೆಯದು ।
ದನುಗೊಳಿಸಿ ಮದದ ಬರಿದೆಯುನ್ಮತ್ತವಿರು ।
ಜನರಿಂದ ದೂರ ಅಡವೇಶ ॥೧೦೬॥

ಕ್ಷುದ್ರ ಜೀವಿಗಳಿಂದು ಚಿದ್ರ ಮತಿವಿಡಲೇನು ।
ಭದ್ರ ಗುರುಕರುಣೆ ಕಾವ್ಯಮತಿ ಸ್ವಾಧ್ಯಾಯ ।
ದದೃಷ್ಟ ಚಿರವು ಅಡವೇಶ ॥೧೦೭॥

ಪ್ರತಿಭಟನೆವಿರಲೇನು ಸತತ ಪ್ರತ್ಯಾಘಾತ ।
ಮಿತಿಮೀರಲಹುದು ಸ್ವರ್ಣ ಶೋಧನೆಯಿಂದ ।
ಜಾತಗುಣ ಜ್ಯೋತಿ ಅಡವೇಶ ॥೧೦೮॥

ಅಗುಳುಣಿಸಿದವನೆಡೆಗೆ ಉಗುಳುವವನಾವನಿರೆ ।
ತ್ಯಾಗುಚಿತ ನೀತಿ ಪರಿಪಾತ್ರ ಜೀವಿಜೊತೆ ।
ಯೋಗರುಚಿದೂರ ಅಡವೇಶ ॥೧೦೯॥

ಈರ್ವ ಮರಿವಿರಲೆನುವ ದುರುಳನುಡಿ ವಂಚಕರ ।
ಪರಿದ್ರೋಹಿಗಳಡೊತ್ತಾಯ ಮಾಡುತಿರೆ ।
ಜರಿದು ಪದಪಾತ ಅಡವೇಶ ॥೧೧೦॥

ನಿರುಪಾಧಿ ಪದದರ್ಥ ಪರದುಪಾಧಿಯದಳಿವು ।
ಪರಿವಿರಲುವೆನಗೆ ತುಂಬುಪಾಧಿಯುವಿರಲು ।
ನಿರುಪಾಧಿ ನಾಮ ಅಡವೇಶ ॥೧೧೧॥

ಬರೆಯುತಿಹುದನು ಕಂಡು ದುರುಳರಿಗೆ ಸರಿಬರದೆ ।
ಹಿರಿಯ ಚಾಮರಸರಿಂತುಪಾಧಿಯ ವ್ಯಂಗ ।
ಸರಿಸಿ ನನ್ನೋಟೆ ಅಡವೇಶ ॥೧೧೨॥

ರುಚಿಪುರಾಣ ಕೃತಿಯ ರಚನೆಯಿಂದೇನಾಯ್ತು ।
ಯೋಚಿಪಗೆ ಪ್ರಶ್ನೆ ನಿಜಗುಣಿಯ ಶಾಸ್ತ್ರಗಳ ।
ರಚನೆಯಿಂದೇನು ? ಅಡವೇಶ ॥೧೧೩॥

ಖಿನ್ನಮತಿಗಳ ಕಾಟ ಮುನ್ನದಿಂ ಬಂದಿರಲು ।
ವಿನ್ನೆನಗೆ ಪೀಡೆವಿರಲು ದಾಸೋಹದಿಂ ।
ಚೆನ್ನಗತಿ ನಿತ್ಯ ಅಡವೇಶ ॥೧೧೪॥

ನಾನೇನೋ ಕೃಪಣಹುದು ನಿನಗೇನು ಬಂತಪ್ಪ ।
ಸನುಮತದ ಕೃತಿಗೆ ದಾಸಾನುದುಷ್ಕೃತಿಗೆ ।
ಮಣಿಪೊಪ್ಪಲಾರೆ ಅಡವೇಶ ॥೧೧೫॥

ಅಂಬಿನಾಶ್ರಯದಿವಿರಲಂಬು ಸೇರಲುವಾಗ ।
ಶಂಭು ನುಡಿ ಧರಿಸಿ ಈಷೆವಿರೆಯಾಘಾತೆ ।
ನಂಬೀಷೆ ಕಾವ್ಯ ಅಡವೇಶ ॥೧೧೬॥

ಮುತ್ತು ಪ್ರಾಪ್ತಿಯೆ ಕಷ್ಟ ಮುತ್ತಿ ಬರುತಿರಲೇನು ।
ಸತ್ಯ ಗುರುವಾಜ್ಞೆ ಪಾಲಿಸುತೆವೀ ಕೃತಿಯ ।
ವಿತ್ತು ಕೃತಿಕೃತ್ಯ ಅಡವೇಶ ॥೧೧೭॥

ದಿನದಿನದ ಘರ್ಷಣದಿಯನಿತನಿತು ಪ್ರತ್ಯಕ್ಷ |
ಕಣಕಣಾನುಭವ ಕೃತಿಗೆ ಪ್ರೋತ್ಸಾಹನಂ |
ಘನ ಘರ್ಷಣೆನ್ನಿ ಅಡವೇಶ ||೧೧೮||

ಒಪ್ಪುವರು ವೀ ತ್ರಿಪದಿ ಕಪ್ಪುಮಸಿ ಹಚ್ಚದಲೆ |
ಒಪ್ಪು ಭೂತಿಗಳು ಕೆಲರಿದನು ಓದುತಿರೆ |
ಕಪ್ಪು-ಕಾಡಿಗೆಯು ಅಡವೇಶ ||೧೧೯||

ಕೆಲರಿಂಗೆ ಕುದಿಯೆಣ್ಣೆ ಕೆಲರಿಂಗೆ ರಸಬೆಣ್ಣೆ |
ಲಲಿತ ಮೃದು ಕಠಿಣ ತ್ರಿಪದಿಗಳು ಇಂದ್ರದನು |
ಸಾಲು ಸಾರಂಗ ಅಡವೇಶ ||೧೨೦||

ನಂದಿ ಪ್ರಿಯ ನಿರುಪಾಧಿ ಸಂಧಿಸುತೆ ಸಾಧುಗುಣ |
ವೃಂದ ಗುರುಜಳಗ ಶರಣರಡಿ ಶರಣಾರ್ಥಿ |
ಯಿಂಡೆನ್ನ ಸೇವೆ ಅಡವೇಶ ||೧೨೧||

ಬೇಡಿಕೆ

ಹಿಂದಿನಾದರ್ಶನದ ವೃಂದನೃಪ ನೀತಿಮತ |
ಗಂಥ ಧರ್ಮಿಡಿದು ನಡೆಯುವಾ ಮತಿನೀಡು |
ವಿಂದು ನಾಯಕಗೆ ಅಡವೇಶ ||೧೨೨||

ನುಡಿಯಂತೆ ನಡೆಯಿರದ ಬೆಡಗು ನುಡಿ ಪಂಡಿತರ |
ಕಡು ಕಹಿಯು ಕಳೆದು ವಿನಯ ನಿಜ ನಿರ್ಮಲತೆ |
ಮಾಡು ಸರ್ವರೊಳು ಅಡವೇಶ ||೧೨೩||

ಉಂಡ ಮನೆಗಳ ಎಣಿಪ ಭಂಡರಿಗೆ ಧೀಂ ನೀಡು |
ಮುಂಡೆ ಹಿರಿತನವನಳಿಸಿ ಮುತ್ತೈದೆ ನಿಜ |
ಗಂಡು ನುಡಿ ನುಡಿಸು ಅಡವೇಶ ||೧೨೪||

ಅಜ್ಞನಾಗಲಿ ಸುಜ್ಞ ಸುಜ್ಞರಿಗೆ ಸುಖವಾಗಿ |
ಪ್ರಜ್ಞೆ ಪಸರಿಸುತ ಮುಕ್ತ ಮಾಡುವ ಶಕ್ತಿ |
ಪ್ರಜ್ಞಗಣ ನೀಡು ಅಡವೇಶ ||೧೨೫||

ಕೆಲರಮನ ವಿಷಯದೆಡೆ ಕೆಲರ ಮನ ಗಳಿಕೆಯೆಡೆ ।
ಬಲ ಶಿಕ್ಷಣೆಡೆಗೆವಿರೆ ಕಾವ್ಯದಾಸೋಹ ।
ದೊಳಗೆನ್ನವಿರಿಸು ಅಡವೇಶ ॥೧೨೬॥

ಮನೆಯೊಡತಿ ತಪ್ಪಿದೊಡೆ ಇನಿಯ ಕ್ಷಮಿಸುತ ಮಮತೆ ।
ಯನಿಡುವಂತೆ ನಾ ಕೈ ತಪ್ಪಿದೊಡೆ ದೇವ ।
ನೆನಿತು ಬಿಡದೆನ್ನ ಅಡವೇಶ ॥೧೨೭॥

ದುರಿತ ಕೃತಿ ವಿಷಯಕುಲ ಗುರುದ್ರೋಹಿ ದುರ್ಮಾರ್ಗಿ ।
ಯರು ನುಡಿಯುತನೀತಿಯೆಡೆಳೆವರಿಂದೆನ್ನ ।
ದೂರಿರಿಸು ಅಡವೇಶ ॥೧೨೮॥

ಕಷ್ಟವೆನಿತಿಡು ದೇವ ಶ್ರೇಷ್ಟದೆಡೆವೆನ್ನಿರಿಸು ।
ಬ್ರಷ್ಟತೆಯ ಪೂರ್ವ ನೀನೆಳೆಯೊ ನಿನ್ನೆಡೆಗೆ ।
ದೃಷ್ಟಿ ಶುಭ ಸೃಷ್ಟಿ ಅಡವೇಶ ॥೧೨೯॥

ಉಣಿಸಿಯುಣ್ಣುವ ಶಕ್ತಿ ಉಣುತ ಮಣಿಯುವ ಕೃಪೆಯ ।
ಸನಿಹ ಸತ್ತ್ವಯಲಿ ಕುಣಿದು ಬೇಡುವೆನಾ ಕ ।
ರುಣಿಸಿ ಪೂರೈಸು ಅಡವೇಶ ॥೧೩೦॥

ಸಗ್ಗ ಸುಖ ನಾನೊಲ್ಲೆ ಕಗ್ಗ ಕೃತಿಯಗ್ಗಳಿಕೆ ।
ಸುಗ್ಗಿ ನನಗಿರಲಿ ಸ್ವಾಭಾವಿಕತೆಯ ಝರಿ ।
ಬುಗ್ಗೇಳುತಿರಲಿ ಅಡವೇಶ ॥೧೩೧॥

ಗುರುವೆ ನೀಂ“ಕಂ”ವಿರುವಿ ವಿರುವೆ ಸಮ ನೀನೆಂದೆ ।
ವಿರುತಾನುವೇನು ವೆನಿಲ್ಲ ವೆರಡಿಲ್ಲ ।
ಸ್ವರವು ನೀನಲ್ತೆ ಅಡವೇಶ ॥೧೩೨॥

ಗುರು ನಿನ್ನ ಕರೆವಿರಲಿ ಬರುದೆಲ್ಲ ಬರುತಿರಲಿ ।
ಸರಲ ಸತ್ವಯಣದೊದಗಿಸುತೆ ಚರಣದೆಡೆ ।
ತ್ವರಿತದಿಂ ವಿರಿಸು ಅಡವೇಶ ॥೧೩೩॥

ಬೇಡಿದೆನು ವೇನೇನೋ ನೋಡಿ ಕೊಣೆಗಾಣಿಸು ।
ಕೊಡುದದನು ಮರಳಿಯುಂಬುದಕೆ ಬರದಂತೆ ।
ನೀಡು ನಿರ್ಲಿಪ್ತ ಅಡವೇಶ ||೧೩೪||

ಬೇಡಿಕೆನ್ನಯ ಧರ್ಮ ನೀಡುವದು ನಿನಧರ್ಮ ।
ಕಾಡುತಿದೆ ಕೂಸು ಕುಡಿಸಿ ಕೊಡುವಳು ಕಾಸು ।
ತೀಡು ಕೃತಿವಹಿಸು ಆಡವೇಶ ||೧೩೫||





# ಪಂಚ ಪಲ್ಲವ

**ಕಾರುಣ್ಯ–೧**

ತೇಲುತಿಹೆ ಧೂಳಿಯಲಿ ಪಾಲಿಸೋ ಗೌರೀಶ ।
ಮುಳುಗಿಹೆನು ಕಣದೊಳಗೆ ಗುರುತಿಡಿಯುತಾ ॥ಪಲ್ಲ॥

ಬಿರುಗಾಳಿ ಬೀಸ್ಯೆತಿ ಭರಭರಾಟೆಯಲಿತ್ತೊ ।
ಗುರಿ ಮೀರಿ ಕೆಂಧೂಳಿವೇರುತಿಹುದೋ ।
ಏರು ರವದಿಯು ಗತಿಯು ಮೀರಿ ಹೋಗದ ರೀತಿ ।
ಕರುಣೆಯಲಿ ತಡೆಯಯ್ಯ ದೀನಬಂಧು ॥೧॥

ಕರೆಗೆ ಕಿವುಡಾಗದಿರು ಕರುಣದಿಂ ನೋಡದಿರೆ ।
ಕುರುಡಾದ ಶಿವನೆಂದು ಕರೆಸಿಕೊಳದು ॥
ಕರೆಕೇಳಿ ನೋಡದಿರೆ ಬರದಿರಲು ನೀಕುಂಟೆ
ಚಿರಕರೆಸಿಕೊಳ್ಳದಿರು ಕರುಣಾಮಯ ॥೨॥

ಉಸುಕು ತುಂಬಿದ ನಯನ ಬಸಿಯುತಿದೆ ಹನಿಗುಂಡು ।
ದಿಸೆಯೆತ್ತ ನೀನಿರುವೆ ಗೋಚರಿಸದು ॥
ಬೀಸು ರಭಸದಿವೆನ್ನ ಕಸವಿಸಿಯ ಮೊರೆವಾಣಿ ।
ಹಸನಾಗಿ ಕೇಳದು ಕೃಪಾ ಸಿಂಧುವೇ ॥೩॥

ಕೆಳಗೆ ನೋಡಿದರಾನು ಹಾಳೂರು ಜಗಧೊಳು ।
ಮೇಲೆ ಕಾಣಿಸುತಿಹುದು ನಿರಬಯಲವು ॥
ಒಲಿದು ಭಕುತಿಯ ಪೂಜೆ ಸಲಿಸಬೇಕೆಂಬಾಸೆ ।
ಜಲ ಪುಷ್ಪ ಕಸ್ತೂರಿ ಒಂದಿಲ್ಲವು ॥೪॥

ಸ್ಮರಿಸಬೇಕೆನುತಿರಲು ಸ್ವರಹೃದಯ ತುಟಿಹೊಲಸು ।
ಮರೆವರಿವದರಿವೊಂದು ನರಪಿಸಲೆ ನಾ ।
ವಿರಿಸುವದು ನಾನೆಂತುದರಿವು ನಿನ್ನಂಶಂತೆ ।
ನಿರ್ಮಲನು ನೀನಿರಲು ವೇನಿರಿಸಲಿ ॥೫॥

ತಿಳಿಯುತಂತಸ್ಥಲದಿ ಸುಳಿದು ಬಳಿಬಾರಯ್ಯ ।
ಕಳವಳಳಿಸುವಿಯೆಂದು ಶರಣಾದೆ ನಾ ॥
ಬಾಲಸಿದ್ರಾಮೇಶ ಕೊಳದಿ ಹಾರುವ ಸಮಯೆ ।
ಬಾಳ ತಡೆಯೆಂದೆನುತ ಪೊರದೆ ಪೊರೆಯೋ ।೬॥

ಕಡಿಮೆಯಾಗಲು ಪವನ ತಡೆಯದೀ ತನು ಪತನ ।
ಕಡೆಗೆ ಶಿಲೆಗಪ್ಪಳಿಸಿ ಚೂರು ಮುನ್ನ ॥
ಒಡಲು ಶಿಶು ಪೋಷಣೆಗೆ ಕುಡಿವದಂಬಲಿಯಂತೆ ।
ಕುಡಿಸು ರಸನಡವೇಶ ನಿರುಪಾಧಿಯೆ ॥೭॥

ಸಂಬೋಧನ–೨

ಸುಗ್ಗಿ ಬಂದಿಹುದಯ್ಯ ಸಗ್ಗದಾಸೆಯ ಮಾಡಿ ।
ಮುಗ್ಗುರಿಸಿ ಮರಳದದ ಸುಡಿ ಪಾಲಿಸು ॥ಪಲ್ಲ॥

ಸೊಸು ಧೂಳಿಯ ಜೀವಿ ಕೆಸರಾಗಿ ಮಾರ್ಪಟ್ಟಿ ।
ಕಸುವಿನಿಂ ತುಳಿತಕ್ಕೆ ಗೊಳಾದೆಯಾ ॥
ಬೀಸಿದಾ ಚಕ್ರದಲಿ ಹಸಿಗಡಿಗೆ ನೀನಾದೆ ।
ಬಿಸಿಲಿನೊಳು ಒಣಗಿ ಚಿಂತಾತುರಾದೆ ॥೧॥

ಮುಚ್ಚಿಡುತ ಬೂದಿಯಲಿ ಕಿಚ್ಚಿಟ್ಟ ಕುಂಬಾರ ।
ಮೆಚ್ಚು ಮನದಿಂದಾಟವಾಡುತಿಹನು ॥
ಬಿಚ್ಚಿಡುತ ಬಾರಿಸಿದ ಹುಚ್ಚ ನೆನಪಿಹುದೇನು ।
ಎಚ್ಚರಾಗಿನ್ನು ತಡಮಾಡಬೇಡ ॥೨॥

ಸರಿಯಾಗಿ ಸುಡದಿರಲು ವಿರುವಡೊಲೆಯಾಶ್ರಯವು ।
ಸರಿವಿರಲು ಪರಮನೆಯ ತಿರುಗಾಟವು ॥
ವಿರಿಸುವರು ವೇನೇನೊ ಚುರಚುರನೆ ಕರಿಯುವರು ;
ಸರಸರನೆ ಸುರಿವಾಗ ಕೊರಳದುರಿಯು ॥೩॥

ಅತ್ತೆ ಬೈಯಲು ಸೊಸೆಗೆ ನೆತ್ತಿಗೇರಿತು ಸಿಟ್ಟು ।
ವೆತ್ತಿ ಒಗೆಯಿತು ನಿನ್ನದಾರಭಸದಿ ॥
ಹತ್ತಿದ್ದ ಜ್ವಾಲಾಗ್ನಿ ಸುತ್ತೆಲ್ಲ ಪಸರಿಸಿತೊ ।
ವಿತ್ಯರ್ಥಗೊಳಿಸಯ್ಯವಿನ್ನಾದರೂ ॥೪॥

ಯಾರು ನೋಡದ ಸ್ಥಿತಿಯ ಚೂರು ಬಾಳುವೆಯಾಯ್ತೆ ।
ಬರುದೊಮ್ಮೆ ಕ್ರಮದಿಂದ ನರಜನ್ಮವು ॥
ಚರಿತಾರ್ಥ ಸಾಧಿಸಲು ಪರಿಪೂರ್ಣನಡವೇಶ ।
ನಿರುಪಾಧಿ ತತ್ವರಿತು ಮುಕ್ತನಾಗು ॥೫॥

ನೀತಿ-೩

ಕರುಳಿನಲಿ ಕರುಣೆಯನು ಸರಳತೆಯ ಗುಣವಿರಿಸಿ :
ಚರಿಸುವದು ಬಹುಕಠಿಣ ನೀತಿಗುಣದಿ ॥ಪಲ್ಲ॥

ಕರುಳ ಮರುಳಾಯಿತೋ ತರಳ ಮೋಹವವಿಡಿದು ।
ಕೊರಳಿಗುರುಲನು ಬೀಸಿದಳೊ ರೂಪಿಣಿ ॥
ಹಾರಾಮ ಹಾಯೆನುತ ಮರಗುತರಮನೆಯತ್ತ ।
ಶ್ರೀರಾಮ ಹೊರಟ ಜೊತೆಗೂಡುತಿತ್ತ ॥೧॥

ಕೀಳುತಿರೆ ಬೇರುಗಳ ಬೆಳೆಯೊತು ಬಳ್ಳಿಗಳು ।
ಬಾಳುವೆಗೆ ಬಗೆ ನೀತಿ ಮಿಗೆ ಸುಗುಣತೆ ॥
ಕಳೆಯಧರಿಸದೆ ಜಗದಿ ಬೆಳಗಬೇಕೆಂಬುದಿದು ।
ಹುಳವೆ ನಿನಗಾಸೆ ತೈಲಿರದಯಂತ್ರ ॥೨॥

ಜಲ ಬಿಸಿಲು ಭೂ ಗಾಳಿ ಬಲದಿ ಸೂಸುತೆ ಪುಷ್ಪ ।
ಸಲುಗೆಯಿಂ ಸೆಳೆಯುತಾ ಮೋಹಿಗಳನು ॥
ಸೆಳೆದೆ ನೀಂ ವೇನನ್ನೊ ಸೆಳೆ ಶರಣಸತಿ ಸೂತ್ರ ।
ಸುಳಿಯಲಡವೇಶ ನಿರುಪಾಧಿ ಮಾತ್ರ ॥೩॥

ಯೋಗ-೪

ಉದಯಾಸ್ತ ಗತಿವಿರದ ಹದಪೂರ್ಣ ಪರತರದ ।
ಸವರ ಶಿವಯೋಗದೊಳು ಸುಖಭೋಗಿಸು ॥ಪಲ್ಲ॥

ಎಣಿಕಿರದ ನಿಯಮಗಳ ಮನುಜಕುಲಕೆಲ್ಲರಿಗೆ ।
ದನುಕರಣ ಸಾಧನದಿ ಗತಿಕಠಿಣ ॥
ಕ್ಷಣ ಹಾಗೆ ಕ್ಷಣ ಹೀಗೆ ಕ್ಷಣದನುಭವವು ವಿರದ ।
ದೆಣಿಕೆಂತೊ ಶಬ್ದಾಬ್ಧಿ ಸೋಗವಳಿದ ॥೧॥

ಗವಿಯೊಳಗೆ ಸಾಗಿರುವ ಗವಿರಾಜ ಹೊರಬರುವ ।
ಸವಿಸವಿದು ಮಂತ್ರಾದಿ ಮಹವೃತ್ತಿಯೆ ॥
ಸುವಿಚಾರವಹ ನಿರೋಧವೆ ನಿರೋಧವು ಸ್ವಾ ।
ಭಾವಿಕತೆ ಸ್ಥಿತಿವೆನಿಪ ಯೋಗ ಗ್ರಹಣ ॥೨॥

ಎನಿತೊ ಜನು ಸಾಧಿಸುತ ಘನ ಮುಕುತಿ ಹೊಂದುತಿಹ ।
ಮನದಿಚ್ಛೆ ನಿನಗಿರಲುವಿಲ್ಲಿ ಮುಳುಗೋ ॥
ಮನನೀಯ ಶಿವಯೋಗ ಜ್ಞಾನ ನಿಶ್ಚಯ ಬಲದಿ ।
ಸನುಮತಿಯೆ ಸಮರಸತೆಯಲ್ಲಿ ಬೆಳಗೋ ॥೩॥

ಕಟ್ಟಿ ಮೇಸಿದ ಹೋರಿ ಬಿಟ್ಟೊಡನೆ ಚಲ್ಲಾಟ ।
ಕಟ್ಟಳಯೆ ಸಾಧನದಿ ವೃತ್ತಿ ಬಂಧ ॥
ಬಿಟ್ಟಿರಲು ಮನವೋಡಿ ಮುಟ್ಟಿಮೂಸಿಸುದಯ್ಯ ।
ಕಟ್ಟಿರದ ಶಿವಯೋಗ ಸಂಧಾನಿಸು ॥೪॥

ಕ್ಷಾರ ಜಲ ಗುಟುಕುಗಳ ಧಾರೆ ಕುಡಿದರೆ ತೃಪ್ತಿ ।
ಯಾರಿಗಾಗಿಹುದಯ್ಯ ತಿಳಿದು ನೋಡು ॥
ಕಾರಣಿಕನಡವೇಶ ನಿರುಪಾಧಿ ಶಿಯೋಗ ।
ಸಾರತರ ಸ್ವಾರಸ್ಯ ಸವಿದು ನೋಡು ॥೫॥

ಜ್ಞಾನ-೫

ವಿರತಿ ವರಸೇವೆ ಗುರುಕರುಣೆವಿಲ್ಲದೆ ಹಿರಿಮೆ ।
ಚಿರದಾತ್ಮ ರಸಸಾಮ್ಯವೆಂತು ಸಾಧ್ಯ ॥ಪಲ್ಲ॥

ತಳಬೇರು ಕುಡಿ ಚಿವುಟಿದಲೆಯೆಂತು ನಿಂತೀತು ।
ಬೆಳೆ ಬೆಳೆಯುತಿಹುದಯ್ಯ ಪದಪದದೊಳು ॥
ಬೆಳಗುದನು ತಿಳಿಯುದಯೆದಳೆಯುದೆಯೆ ನಿರ್ಮಲತೆ ।
ಯೊಳಗಿನ ಮಹಾನಂದ ಪೂರ್ಣತೆಯನು ॥೧॥

ಪರಮ ಪುರುಷಾರ್ಥಕ್ಕೆ ಕರಮು ಕಾರಣವೆಂದು ।
ಹೊರಟಿರು ನಿದಾಘನಿಗೆ ಋಭು ಗುರುಗಳ ॥
ಮೂರನೆಯ ಬೋಧದಿಂದಿರದ ವಿಪರ್ಯಯ ಭಾವ ।
ಚಿರವಾದ ವಿಶ್ರಾಂತಿ ಹೊಂದಿದವನು ॥೨॥

ಕತ್ತೆ ಭಾರದ ಗ್ರಂಥ ಹೊತ್ತದುರ್ವಾಸನಿಗೆ ।
ಕತ್ತೆನಿವನೋರ್ವೆನಲು ನಾರದ ಋಷಿ ॥
ಅತ್ತೆಸೆದು-ಶಿವನಿಂದ ಸತ್ಯಾರ್ಥ ತಿಳಿವ ಮುನಿ ।
ಸತ್ಪುರುಷನಾದ ನೀನೆಂದು ಋಷಿಯೋ ॥೩॥

ಎಲ್ಲ ಸೌಖ್ಯದೊಳು ಮೇಲುಳ್ಳ ಲಾಭವ ಕಂಡ ।
ಸಲ್ಲು ಸುಖದಾತ್ಮಮಯ ಕಚದೇವನು ॥
ಸಲ್ಲಲಿತ ಗದ್ಗದದಿ ಚಲ್ಲಿದಾಲ್ಹಾದ ನುಡಿ ।
ವೆಲ್ಲಿರಲಿ ಬಿಡಲೇನು ವಾತ್ಮರೂಪ ॥೪॥

ನಾನೆಲ್ಲಿವಿಲ್ಲವೋ ವಿಲ್ಲವದು ನಾನಿರದೆ ।
ವೆನಿತಿಲ್ಲವೆಂಬುದಾ ಚಿನ್ಮಯೋಕ್ತಿ ॥
ಸನ್ಮತದ ಸುಜ್ಞಾನಿ ತನಿಯನಡವೇಶ ಚಿರ ।
ಚಿನುಮಯದ ನಿರುಪಾಧಿ ನಿಶ್ಚಯೋಕ್ತಿ ॥೫॥

## ಕೃತಿ ಗ್ರಹಣ

ಎಡೆ ನೋಡಿಯುಣ್ಣುವವ ಕಡಿಯ ಹರಳವದರಳು ।
ದಡಿಗೆ ಬಡಿಸಿಹೆನು ಹರಳು ಬಂದಿರಲದನು ।
ಕಡೆಗಿಡುತ ಕುಡಿಯೊ ಆಡವೇಶ ॥೧॥

ತುಣುಕರಿವೆ ಜೋಡಿಸಿದ ಸುಣುಪು ಕೌದಿಯ ಸೊಂಪು ।
ಹೆಣೆದ ಚಿನ್ಮೂರ್ತಿ ಸೊಂಪವೋ ತಂಪವೋ ।
ಗುಣಿಯಂಗೆ ವೇದ್ಯ ಆಡವೇಶ ॥೨॥

ಒಣ-ಕಾಷ್ಠ-ದೆಳ್ಳನಿಂ ಮಿಸಗುತಿಹ ಗಂಧೆಣ್ಣೆ ।
ಮನಕೆ ಆಲ್ಹಾದ ಶಿರತಂಪು ಕೇಶರಿಯು ।
ದೊಣಗಿರಲು ಬೆಲೆಯು ಆಡವೇಶ ॥೩॥

ದಾಸೋಹದ ಭಿಕ್ಷೆಯುದ ಸುಸೇವೆಯೊಳಗಾನು ।
ಜೇಸರದೆ ಹೊಸೆದ ವಿವಿಧ ಪರಿಮಳ ಮಾಲೆ ।
ವಾಸಿಸುತ ಗ್ರಹಣ ಆಡವೇಶ ॥೪॥

ವಾಸನೆಯುವಿಲ್ಲೆಂದು ಬೀಸಿದರೆ ಭೂದೆಡೆಗೆ ।
ನೀಶ ಗ್ರಹಿಸುವನು ಗಂಧಿರದದುನ್ಮತ್ಥ ।
ಕುಸುಮ ಪ್ರೀಯ ಗಿರಿಶ ಆಡವೇಶ ॥೫॥

ನೆಲೆಯೊಂದುವಿರಲು ಸೆಲೆ ಪುಟಕೆ ರುಚಿ ಭಿನ್ನ ।
ಕೆಲವಿಲ್ಲಿ ಗ್ರಹಣ ಲಕ್ಷಾರ್ಥ ಮಾತ್ರದಿಂ ।
ಶೀಲಗಾನಂದ ಆಡವೇಶ ॥೬॥

ಜೀವನದ ಘರ್ಷಣದಿ ಕವಿದ ಕೆಲ ಸ್ವಾನುಭವ ।
ಪ್ರವಚನ ಪುರಾಣ ಪದ್ಧತಿಯ ಬೋಧದೊಳು ।
ನವರಸಾನುಭವ ಆಡವೇಶ ॥೭॥

ತನ್ನ ಸತಿ ರೂಪು ಸಮ ಚನ್ನೆ ತನ್ನರಸ ಜೊತೆ ।
ಯುಣ್ಣುವದು ಕಂಡು ಭ್ರಾಂತನಾದರೆ ಸತಿಯು ।
ಳಿನ್ನುರೆ ನಿರಾಳ ಆಡವೇಶ ॥೮॥

ಸಲ್ಲಿಸಿದನ್ನೈದಾರು ನಾಲ್ಕಧಿಕವಯಸಿನೊಳು ।
ಸಲ್ಲುಸಾಹಿತ್ಯ–ವಿದ್ಯಾ ಅಲಂಕಾರ ।
ಉಳ್ಳ ಪದವಿಧರ ಆಡವೇಶ ||೯||

ವಿರಚಿತಂ–ಮರೆಗುದ್ದಿ ಪುರವಾಸಿ ದಾಸೋಹ ।
ಪರಮುದಡವೇಶ್ಮಠಾಧಿಪತಿ ದೇಶಿಕನು ।
ನಿರುಪಾಧಿಯಿಂದ ಆಡವೇಶ ||೧೦||

ನಾಗರಿಯೆ ರಸಗೀತ ಮುಗಿದು ಮಡಿವಾಳೇಶ ।
ಯೋಗಿ ಚರಿತೆಯದು–ಸಪ್ತತೀರ್ಥದಿ ಬಳಿಕ ।
ಸಾಗಿ ಚಿನ್ಮೂರ್ತಿ ಆಡವೇಶ ||೧೧||

ಒಂದೆಂಟು ನವದಷ್ಟ ಹೊಂದಿಸಿದ ಶಕ–ನಳದಿ ।
ವಿಂದು ಚೈತ್ರ್ಯದು ತಿಥಿ ಶುಕ್ಲ–ಶಶಿ–ದಿನದಿ ।
ಮುಂದಿಡುತ ಹರ್ಷ ಆಡವೇಶ ||೧೨||

**ಕೃತಿಯರ್ಪಣಂ**

ಶಾರ್ದೂಲವಿಕ್ರೀಡಿತ–

ಚಂದ್ರಾಬ್ಜಚೂಡ ಮುಖಾಂಗ ಸಂಭವದ–ವಿಶ್ವಾರಾಧ್ಯ ಸಿಂಹಾಸನೇ ।
ಚಂದ್ರಾಂಗೊಪ್ಪು ವಿರಾಜಮಾನ ಪ್ರತಿಭಾ ಸನ್ಮಾನ್ಯ ಸುಜ್ಞಾನರಾ ।।
ವೃಂದಕ್ಕೆಲ್ಲ ವಿಭೂತಿ ಶ್ರೀಕರವರಾ ವಿಶ್ವೇಶ್ವರಾಚಾರ್ಯರಾ ।
ಸಂದ್ಪದಾಬ್ಜಂಗದಿಯರ್ಪಿತಂ ತ್ರಿಪದಿ ಸ್ವಾರಸ್ಯಾರ್ಥ ಚಿನ್ಮೂರ್ತಿಯಂ||

ವಿಧೇಯ
ಬ್ರಹ್ಮಶ್ರೀ ನಿರುಪಾದಯ್ಯಸ್ವಾಮಿ

# ಮಂಗಲಂ

ರಾಗ–ಜೀವನಪುರಿ ತಾಳ–ಕೇರವಾ

ಚಿನ್ಮಯಂದ ಜ್ಯೋತಿ ಬೆಳಗಿರೆ ||ನೀರೆ||
ಚಿನ್ಮಯಗೆ ಜ್ಯೋತಿ ಬೆಳಗಿರೆ ||೧||

ಚೈತನ್ಯಮಯನಿಗೆ ಚೈತನ್ಯ ಚೇತಕಗೆ |
ಚೈತನ್ಯಮಯರು ಬೆಳಗಿರೇ ||ನೀರೆ|| ||೨||

ತೇಜ ತಥ್ಯಾರ್ಥಗೆ ತೇಜ ತತ್ವಜ್ಞಗೆ |
ತೇಜೋಮಯರೆಲ್ಲ ಬೆಳಗಿರೆ ||ನೀರೆ|| ||೩||

ಜ್ಞಾನ ಪೀಠಾಧಿಪತಿಗೆ ಜ್ಞಾನಾಧಿರಾಜಗೆ |
ಜ್ಞಾನರತಿ ಪ್ರಿಯರು ಬೆಳಗಿರೇ ||ನೀರೆ|| ||೪||

ಗರಿಮೆ ಗುರುಪಾದಯುಗೆ ಗುರುಕಾರ್ಯನಿರತಗೆ |
ನಿರುಪಾಧಿ ಪ್ರಿಯರು ಬೆಳಗಿರೇ ||ನೀರೆ|| ||೫||

ಸತ್ಯಂ ಶಿವಂ ಸುಂದರಂ

# ಶ್ರೀ ನಿರುಪಾದಯ್ಯಸ್ವಾಮಿಗಳ ಕೃತಿಗಳು

| | | ಬೆಲೆ ರೂ. |
|---|---|---|
| ೧. | ಮರೆಗುದ್ದಿಯ ಶ್ರೀ ಮಡಿವಾಳೇಶ್ವರ ಚರಿತೆ (ಭಾಮಿನಿ ಷಟ್ಪದಿ) | ೫-೦೦ |
| ೨. | ಚಿನ್ಮೂರ್ತಿ (ತ್ರಿಪದಿಗಳು) | ೫-೦೦ |
| ೩. | ರಸ ಗೀತ (ಹಿಂದಿ) | ೨-೦೦ |
| ೪. | ಸಪ್ತತೀರ್ಥ (ಹಿಂದಿ ಕಥೆಗಳು) | ೨-೦೦ |

ಮುಂಬರುವ ಕೃತಿ

ಮಾಯಾಕಲ್ಯಾಣ (ಹಿಂದಿ-ಕಾವ್ಯ)